# ಬಳಕೆದಾರರೇ ಎಚ್ಚೆತ್ತುಕೊಳ್ಳಿ

ನರೇಂದ್ರ ನಾಯಕ್




ಭಾರತ ಜ್ಞಾನ ವಿಜ್ಞಾನ ಸಮಿತಿ

# ಬಳಕೆದಾರರೇ ಎಚ್ಚೆತ್ತುಕೊಳ್ಳಿ

ನರೇಂದ್ರ ನಾಯಕ್

ಭಾರತ ಜ್ಞಾನ ವಿಜ್ಞಾನ ಸಮಿತಿ
ಕರ್ನಾಟಕ ರಾಜ್ಯ
ಎಲೆಕ್ಟ್ರೋ ಕೆಮಿಕಲ್ ಸೊಸೈಟಿ ಆಫ್ ಇಂಡಿಯಾ
ಭಾರತೀಯ ವಿಜ್ಞಾನ ಮಂದಿರ
ಬೆಂಗಳೂರು – 560 012

"Balakedarare Yechethukolli" written by Narendra Naik, printed & published by H. S. Niranjanaradhya onbehalf Bharath Gyan Vigyan Samithi, Electrochemical Society of India, Indian Institute of Science, Bangalore - 560 012. Ph: 3342384

Page 88 + IV



ಬೆಲೆ : ರೂ. 10/- ಹತ್ತು ರೂಪಾಯಿಗಳು

| |
|---|
| ಮುಖಪುಟ, ಒಳಪುಟ ವಿನ್ಯಾಸ<br>ಎಂ. ಹೆಚ್. ಶ್ರೀಧರಮೂರ್ತಿ |
| ಒಳಪುಟ ಚಿತ್ರಗಳು<br>ಗೋಪಾಡ್ಕರ್ |
| ಡಿಟಿಪಿ<br>ಕೆ. ಎನ್. ವೆಂಕಟೇಶ್ |

# ಓದುವ ಮುನ್ನ



ಈ ಪುಸ್ತಕವು ಬಳಕೆದಾರರನ್ನು ಎಚ್ಚರಿಸುವ ಉದ್ದೇಶದಿಂದ ಬರೆಯಲ್ಪಟ್ಟಿದೆ. ಇದು ಆಂದೋಲನದ ಕ್ರಿಯಾಸಕ್ತರಿಗೆ ಕೈಪಿಡಿಯಾಗಿ ಉದ್ದೇಶಿತವಾಗಿರುವುದಕ್ಕಿಂತಲೂ, ಇದರ ಬಗ್ಗೆ ಏನೂ ತಿಳಿದಿಲ್ಲದವರಿಗೆ ಸಂಘಟಿಸುವ ಆಸಕ್ತಿ ಹುಟ್ಟಿಸಲು ಬರೆಯಲ್ಪಟ್ಟಿದೆ.

ಇದರಲ್ಲಿನ ವಿಚಾರಗಳು ಬಳಕೆದಾರ ಶಿಕ್ಷಣ ಟ್ರಸ್ಟ್, ಮಂಗಳೂರು, ಇದರ ಸಂಚಾಲಕರಾಗಿಯೂ, ಬಳಕೆದಾರರ ಚಳವಳಿ ಪತ್ರಿಕೆಯ ಸಂಪಾದಕನಾಗಿಯೂ ಕಾರ್ಯವಹಿಸಿದಾಗ ನನಗಾದ ಕೆಲವು ಅನುಭವಗಳನ್ನು ಆಧರಿಸಿದೆ.

ಓದುಗರು ಇದರ ಮಾಹಿತಿಯನ್ನು ಉಪಯೋಗಿಸಿ ತಮ್ಮನ್ನು ಜಾಗ್ರತ ಬಳಕೆದಾರರಾಗಿಸಿಕೊಂಡಲ್ಲಿ ಇದನ್ನು ಬರೆದ, ಪ್ರಕಟಿಸಿದ ಉದ್ದೇಶವು ಸಾರ್ಥಕವಾದೀತೆಂದು ನಂಬುತ್ತೇನೆ.

ಬಳಕೆದಾರರ ಆಂದೋಲನದಲ್ಲಿ ನನಗೆ ಆಸಕ್ತಿಯನ್ನು ಹುಟ್ಟಿಸಿದ *ಡಾ. ಕೆ. ಪಿ. ಎಸ್. ಕಾಮತ್, ಡಾ. ರವೀಂದ್ರ ಶಾನ್‌ಭಾಗ್* ರಿಗೂ, ಬಳಿಕ, ಈ ಆಂದೋಲನದಲ್ಲಿ ನನಗೆ ಅಮೂಲ್ಯ ಸಲಹೆ, ಸಹಕಾರ, ಮಾರ್ಗದರ್ಶನಗಳನ್ನು ಕೊಟ್ಟಿರುವ *ಡಾ. ಪ. ನಾರಾಯಣ ರಾವ್* ರವರಿಗೂ ಈ ಪುಸ್ತಕವು ಸಮರ್ಪಿತವಾಗಿದೆ.

ಮಂಗಳೂರು — ನರೇಂದ್ರ ನಾಯಕ್

ಆಗಸ್ಟ್, 1994





# ಬಳಕೆದಾರರ ಆಂದೋಲನವೆಂದರೇನು ?

ಬಳಕೆದಾರರ ಆಂದೋಲನವೆಂದರೇನೆಂಬ ಪ್ರಶ್ನೆ ಹುಟ್ಟುವುದು ಸಹಜ. ಇದರ ಬಗ್ಗೆ ಸ್ಪಷ್ಟವಾದ ವಿವರಣೆಗಳು ಅಗತ್ಯ. ಕೆಲವು ಪಂಚತಾರಾ ಹೋಟೇಲುಗಳಲ್ಲಿ ಮಾತ್ರ ವಿಚಾರಗೋಷ್ಠಿಗಳನ್ನು ನಡೆಸಿ, ವಿಮಾನದಲ್ಲಿಯೇ ಹಾರಾಡುವುದರಿಂದ ಆರಂಭಿಸಿ ಖಾಸಗೀಕರಣವೆಂಬ ಮಂತ್ರವನ್ನೇ ಪಠಿಸುವ ಸಂಘಟನೆಗಳಿವೆ. ಕೆಲವು ಮಧ್ಯಮವರ್ಗದ ಬಳಕೆದಾರರ ಟೆಲಿಫೋನ್ ಟಿ.ವಿ. – ಮಿಕ್ಸಿ – ಫ್ರಿಜ್‌ಗಳ ರಿಪೇರಿ, ಗ್ಯಾರಂಟಿಗಳ ಬಗ್ಗೆ, ವಿಮಾನ ಪ್ರಯಾಣಿಕರ ಸೌಲಭ್ಯಗಳ ಬಗ್ಗೆ ಮಾತ್ರ ಸಂಘಟನೆಗಳು ಕಾರ್ಯವಹಿಸುವಂತೆ ಕಾಣುತ್ತದೆ.

ಆದರೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆರಂಭಿಸಿ ಬೆಳೆದ ಬಳಕೆದಾರರ ಆಂದೋಲನವು ಇವೆಲ್ಲವನ್ನೂ ಮೀರಿ, ಬಳಕೆದಾರನೆಂಬ ಶಬ್ದಕ್ಕೆ ವಿಶಾಲವಾದ ಪರಿವ್ಯಾಪ್ತಿಯನ್ನು ಕಲ್ಪಿಸಿ ಬೆಳೆಯಿತು. ನಮ್ಮ ಪ್ರಕಾರ ಬಳಕೆದಾರ ಎಂಬ ಶಬ್ದಕ್ಕೆ ಅತಿ ವಿಶಾಲವಾದ ಪರಿವ್ಯಾಪ್ತಿಯಿದೆ.

## ಬಳಕೆದಾರ ಎಂದರೆ ಯಾರು ?

**ಹಣ ಕೊಟ್ಟು ಖರೀದಿಸಿ ಯಾ ದೇಶದ ನಾಗರಿಕನಾಗಿರುವ ಕಾರಣ ವಸ್ತು ಯಾ ಸೇವೆಗಳನ್ನು ಉಪಯೋಗಿಸುವ ವ್ಯಕ್ತಿ ಬಳಕೆದಾರ**

ಬಳಕೆದಾರರ ಆಂದೋಲನವು ಅತಿ ವಿಶಾಲವಾದ ಈ ಪರಿವ್ಯಾಪ್ತಿಯಲ್ಲಿ ಕಾರ್ಯವಹಿಸುತ್ತಿದೆ. ಆದರೆ, ಇದು ಬಳಕೆದಾರರ ರಕ್ಷಣಾ ಕಾಯಿದೆಯಡಿಯಲ್ಲಿ ಈ ಶಬ್ದದ ಪರಿವ್ಯಾಪ್ತಿಗಿಂತ ಭಿನ್ನವಾಗಿದೆ. ಈ ಬಗ್ಗೆ ಹೆಚ್ಚಿನ ವಿವರಣೆಯನ್ನು ಈ ಕಾಯಿದೆಯ ಬಗ್ಗೆ ಬರೆಯುವಾಗ ನೋಡೋಣ.

ಆದರೆ, ನಮ್ಮ ಸಂಘಟನೆಗಳ ಪ್ರಕಾರ ದೇಶದ ಪ್ರತಿಯೊಬ್ಬ ಪ್ರಜೆಯೂ ಸರಕಾರವು ಕೊಡುವ ವಸ್ತು, ಸೇವೆಗಳ ಬಳಕೆದಾರ.

## ಪೂರೈಕೆದಾರ ಎಂದರೆ ಯಾರು ?



**ಬಳಕೆದಾರ ಉಪಯೋಗಿಸುವ ವಸ್ತು ಯಾ ಸೇವೆಯ ಮಾರಾಟ / ಮೇಲ್ವಿಚಾರಣೆ / ಹೊಣೆಗಾರಿಕೆ ಹೊತ್ತ ವ್ಯಕ್ತಿ ಯಾ ಸಂಸ್ಥೆ ಪೂರೈಕೆದಾರ**

ವಸ್ತುಗಳ ಖರೀದಿಯಲ್ಲಿ ಈ ಸಂಬಂಧ ಅತಿ ಸುಲಭದ್ದು. ಹಣ ಕೊಟ್ಟು ಖರೀದಿಸುವಾತ ಬಳಕೆದಾರ, ಮಾರಾಟ ಮಾಡುವಾತ ಪೂರೈಕೆದಾರ.





ಆದರೆ, ಸೇವೆಗಳನ್ನು ಗುರುತಿಸುವಾಗ ಈ ಸಂಬಂಧದ ಬಗ್ಗೆ ಸ್ವಲ್ಪ ಆಲೋಚಿಸಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಇದು ನೇರ, ಸ್ಪಷ್ಟ ಸಂಬಂಧವಾದರೂ, ಉಳಿದವುಗಳಲ್ಲಿ ಕ್ಲಿಷ್ಟವಾಗುತ್ತದೆ. ಉದಾಹರಣೆಗೆ ವೈದ್ಯರ ಸೇವೆ ಉಪಯೋಗವಾಗುವ ಸಂದರ್ಭದಲ್ಲಿ ಅದು ನೇರವಾದ ಸಂಬಂಧ. ನಾವು ಹಣಕೊಡುತ್ತೇವೆ, ವೈದ್ಯರು ಪರೀಕ್ಷಿಸಿ ಔಷಧ ಕೊಡುತ್ತಾರೆ.

ಕೆಲವೊಮ್ಮೆ ಸಂಬಂಧಗಳು ಕ್ಲಿಷ್ಟವಾಗಿರುತ್ತವೆ. ಉದಾಹರಣೆ : ನಿಮ್ಮ ಊರಿನಲ್ಲಿ ರಾಷ್ಟ್ರೀಯ ಹೆದ್ದಾರಿಯಿದೆ. ಅದರ ವ್ಯವಸ್ಥೆ ಸರಿಯಾಗಿಲ್ಲ. ನೀವು ಈ ಬಗ್ಗೆ ಸ್ಥಳೀಯ ಆಡಳಿತವಾದ ನಗರಸಭೆ, ಮಹಾನಗರಪಾಲಿಕೆ ಯಾ ಮಂಡಲ ಪಂಚಾಯತ್‌ಗೆ ದೂರು ಸಲ್ಲಿಸಿದರೆ ಅದು ನೇರವಾಗಿ ಕಸದ ಬುಟ್ಟಿಗೆ ಸೇರುವುದು. ಯಾಕೆಂದರೆ, ಈ ಸಂದರ್ಭದಲ್ಲಿ ಅವರು ಪೂರೈಕೆದಾರರೇ ಅಲ್ಲ ತಾನೆ?

ನಮ್ಮ ಸಂಘಟನೆ ಆರಂಭವಾದಾಗಲಷ್ಟೆ ಒಬ್ಬರು ನಮ್ಮಲ್ಲೊಂದು ದೂರು ತಂದರು. ಅವರ ಮಗಳನ್ನೊಬ್ಬ ವ್ಯಕ್ತಿ ಮದುವೆಯಾಗಲು ಒಪ್ಪಿದ್ದನಂತೆ. ವರದಕ್ಷಿಣೆಯಾಗಿ ರೂ. 30,000 ನಿಗದಿಯಾಗಿತ್ತು. ಆದರೆ, ಆತ ರೂ. 40,000 ಕೊಟ್ಟ ಬೇರೆಯೊಬ್ಬರ ಮಗಳನ್ನು ಮದುವೆ ಮಾಡಿಕೊಂಡ. ಇದನ್ನು ಕಂಡು, ಕೆರಳಿ ಕೆಂಡವಾದ ಇವರು ಈ ಸಮಸ್ಯೆಯನ್ನು ನಾವು ಎತ್ತಿಕೊಳ್ಳಬೇಕೆಂದರು. ಇಲ್ಲಿ ಯಾರು ಬಳಕೆದಾರರು? ಯಾರು ಪೂರೈಕೆದಾರರೆಂಬ ಪ್ರಶ್ನೆ ಬಾಧಿಸಿತು?

ಆದರೆ, ಇದನ್ನೂ ನಾವು ಬಳಕೆದಾರರ ಆಂದೋಲನದ ಪರಿವ್ಯಾಪ್ತಿಯಲ್ಲಿ ತರಲು ಸಾಧ್ಯ. ಈಗ ವರದಕ್ಷಿಣೆ ನಿಷೇಧ ಕಾಯಿದೆಯಿದೆ. ಈ ಬಗ್ಗೆ ನಾವು ಪೊಲೀಸರಲ್ಲಿ ದೂರು ಸಲ್ಲಿಸಿ, ಅವರು ಕಾರ್ಯೋನ್ಮುಖರಾಗುವಂತೆ ಮಾಡಬಹುದು. ಈ ಸಂದರ್ಭದಲ್ಲಿ ನಾವು ಪೊಲೀಸರ ಸೇವೆಗಳ ಬಳಕೆದಾರರಾಗುತ್ತೇವೆ!

ಬಳಕೆದಾರರ ಆಂದೋಲನದ ಮುಖ್ಯವಾದ ಉದ್ದೇಶ. ಬಳಕೆದಾರರ ಹಕ್ಕುಗಳ ರಕ್ಷಣೆ, ಬಳಕೆದಾರರಿಗೆ ಶಿಕ್ಷಣ. ಸಂಘಟನೆಗಳ ಮೂಲಕ, ವೈಯಕ್ತಿಕ ಪ್ರಯತ್ನಗಳ ಮೂಲಕ ಇದು ಸಾಧ್ಯ. ವ್ಯಕ್ತಿಗಳಿಗೆ ಹೋರಾಟ ನಡೆಸಲು ಯಾ ಶಿಕ್ಷಣ ಕೊಡಲು ಕಷ್ಟವಾಗುವ ಕಾರಣ, ಸಂಘಟಿಸಲು ಪ್ರಯತ್ನಿಸುವುದು ಮುಖ್ಯ.





# ಬಳಕೆದಾರರ ಹಕ್ಕುಗಳು

ಬಳಕೆದಾರರ ಹಕ್ಕುಗಳು ನಮ್ಮ ಆಂದೋಳನಕ್ಕೊಂದು ಬಹಳ ಸ್ಥೂಲವಾದ ರೂಪು – ರೇಶೆಗಳನ್ನು ಕೊಡುತ್ತವೆ. ನಮ್ಮ ಹಕ್ಕುಗಳ ಬಗ್ಗೆ ಮಾಹಿತಿ ಪಡೆಯುವುದು ಅತಿ ಮುಖ್ಯ. ಇವುಗಳನ್ನು ವಿವರಣೆಗಳೊಂದಿಗೆ ಇಲ್ಲಿ ಕೊಟ್ಟಿದ್ದೇವೆ.

## 1. ಆರಿಸಿ, ಪಡೆದುಕೊಳ್ಳುವ ಹಕ್ಕು :

ಬಳಕೆದಾರರಿಗೆ ತಮಗೆ ಅಗತ್ಯವಿರುವ ವಸ್ತು ಯಾ ಸೇವೆಗಳಲ್ಲಿ ಬೇಕಾದವುಗಳನ್ನು ಆರಿಸಿ, ಪಡೆದುಕೊಳ್ಳುವ ಹಕ್ಕಿದೆ. ಈ ವಸ್ತು ಯಾ ಸೇವೆಗಳು ಸರಿಯಾದ ಗುಣಮಟ್ಟದವಾಗಿರಬೇಕು. ಕಳಪೆ ಗುಣಮಟ್ಟದ ವಸ್ತು / ಸೇವೆಗಳನ್ನು ಕೊಟ್ಟು, ಇವುಗಳಲ್ಲಿ ಯಾವುದಾದರೂ ಒಂದನ್ನು ಉಪಯೋಗಿಸಿ / ಖರೀದಿಸಿ ಎಂದಾಗ ಈ ಹಕ್ಕಿಗೆ ಮಾನ್ಯತೆ ಬರುವುದಿಲ್ಲ.

ಗ್ರಾಹಕ ಆಯ್ಕೆ ನಮಗೆ ಯಾವಾಗ ಲಭಿಸಿದೆ? ಆರ್ಥಿಕವಾಗಿ ತೀರಾ ಮುಂದಿರುವ ಶ್ರೀಮಂತ ವರ್ಗಕ್ಕೆ ಇದು ಮೊದಲಿಂದಲೂ ಇತ್ತು. ಭಾರತದಲ್ಲಿ ಲಭ್ಯವಿಲ್ಲದ ವಸ್ತು ಯಾ ಸೇವೆ ಬೇಕಾದರೆ ಇವರು ವಿದೇಶಕ್ಕೆ ಹೋಗಿ ಇವುಗಳನ್ನು ಪಡೆಯುವ ಶಕ್ತಿಯಿದ್ದವರಾದ ಕಾರಣ, ಈ ತೊಂದರೆ ಅವರಿಗೆ ಯಾವತ್ತೂ ಇರಲಿಲ್ಲ!

ಇತ್ತೀಚಿನ ಆರ್ಥಿಕ ನೀತಿಯ ಉದಾರತೆ, ಆಮದುಗಳ ಮೇಲಿನ ನಿಯಂತ್ರಣ ರದ್ದು ಇತ್ಯಾದಿಗಳಿಂದಾಗಿ ಮಧ್ಯಮ ವರ್ಗದವರಿಗೂ ಈ ಆಯ್ಕೆ ಸಿಕ್ಕಿದೆ. ಅವರೂ ಬಹುರಾಷ್ಟ್ರೀಯ ಕಂಪನಿಗಳ ಕೋಕೊಕೋಲಾ, ಪೆಪ್ಸಿ ಕೋಲಾಗಳನ್ನು ಕುಡಿಯಬಹುದು! ಆಮದಿತ ಕಾರು, ದ್ವಿಚಕ್ರ ವಾಹನಗಳನ್ನು ಚಲಾಯಿಸಬಹುದು ಇತ್ಯಾದಿ.

ಆದರೆ, ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೆ ಇದು ಕನಸಿನ ಗಂಟಾಗಿ ಉಳಿದಿದೆ. ರೇಷನ್ ಅಂಗಡಿಗೆ ಹೋದರೆ ಪ್ರಾಣಿಗಳಿಗೂ ಅಸಹ್ಯವಾಗುವ ವಾಸನೆಯ ಧಾನ್ಯಗಳು, ಸರಕಾರಿ ಆಸ್ಪತ್ರೆಗೆ ಹೋದರೆ ಔಷಧಗಳಿಲ್ಲ, ಔಷಧಗಳಿದ್ದರೆ ವೈದ್ಯರಿಲ್ಲ, ಎರಡೂ ಇದ್ದಲ್ಲಿ ಆಸ್ಪತ್ರೆಗೆ ಕಟ್ಟಡವೇ ಇಲ್ಲ! ಒಟ್ಟಿನಲ್ಲಿ ಜನ ಸಾಮಾನ್ಯರಿಗೆ ಈ ಆರಿಸಿ ಪಡೆದುಕೊಳ್ಳುವ ಹಕ್ಕು ಇನ್ನೂ ಅಲಭ್ಯವಾಗಿಯೇ ಇದೆ!

ಪೂರೈಕೆದಾರರು ಈ ಹಕ್ಕಿಗೆ ಎಷ್ಟು ಮಾನ್ಯತೆ ಕೊಡುತ್ತಾರೆ? ಸರಕಾರಿ ಕಚೇರಿಯ ಜವಾನನಿಂದ ಆರಂಭಿಸಿ, ಮಂತ್ರಿಗಳವರೆಗೆ, ಖಾಸಗಿ ರಂಗದ ಗೂಡಂಗಡಿಯಿಂದ





ತಯಾರಕರವರೆಗೆ ಎಲ್ಲರೂ ಬಳಕೆದಾರರ ಬಗ್ಗೆ ಅಸಡ್ಡೆ, ಅನಾಸಕ್ತಿ ತೋರಿಸುವವರೇ! ಇದು ಎಷ್ಟರ ಮಟ್ಟಿಗೆಯೆಂದರೆ ಒಮ್ಮೆ ಲೋಕ ಸಭೆಯಲ್ಲಿ ಟೆಲಿಫೋನ್‌ನ ಬಗ್ಗೆ ಸದಸ್ಯರು ದೂರಿದಾಗ, ಆಗ ಈ ಖಾತೆಯ ಮಂತ್ರಿಯಾಗಿದ್ದ ದಿ|| ಸಿ. ಎಂ. ಸ್ಟೀವನ್‌ರವರು "ಯಾರಿಗೆ ಟೆಲಿಫೋನ್‌ನ ಬಗ್ಗೆ ಅಸಮಾಧಾನ ವಿದೆಯೋ ಅವರು ತಮ್ಮ ಉಪಕರಣವನ್ನು ಹಿಂದೆ ಕೊಡಬಹುದು, ಅವರ ಸಂಪರ್ಕ ಕಡಿದು ಹಾಕುತ್ತೇವೆ" ಎಂದಿದ್ದರು! ಲೋಕಸಭಾಸದಸ್ಯರನ್ನೇ ಈ ರೀತಿಯಿಂದ ನಡೆಸಿಕೊಳ್ಳುವಾಗ ಜನ ಸಾಮಾನ್ಯರ ಪಾಡೇನು?

ಕೆಲವೊಮ್ಮೆ ಸೇವೆಗಳು / ವಸ್ತುಗಳು ಸರಕಾರಿ ಏಕಸ್ವಾಮ್ಯದೊಳಗಿರುತ್ತವೆ. ಆಗ, ಆರಿಸಿ ಪಡೆದುಕೊಳ್ಳುವ ಪ್ರಶ್ನೆಯೇ ಬರುವುದಿಲ್ಲ! ಬಂದರೂ, ಅದು ಬೇಕಾದರೆ ಇದನ್ನು ಸ್ವೀಕರಿಸು, ಇಲ್ಲವಾದಲ್ಲಿ ಅದೂ ಇಲ್ಲ! ರೇಷನ್ ಅಂಗಡಿಗೆ ಹೋದ ಬಳಕೆದಾರ, ಪೋಸ್ಟಾಫಿಸಿಗೆ ಹೋದವರು, ಪೊಲೀಸರಲ್ಲಿ ದೂರುಸಲ್ಲಿಸಲು ಹೋದವರು ಇಂತಹ ಸನ್ನಿವೇಶಗಳನ್ನು ಎದುರಿಸಬೇಕಾಗುವುದು.

## 2. ಸುರಕ್ಷಿತವಾದ ವಸ್ತು ಮತ್ತು ಸೇವೆಗಳನ್ನು ಪಡೆಯುವ ಹಕ್ಕು.

ನಾವು ಪಡೆಯುವ ವಸ್ತು ಯಾ ಸೇವೆಗಳು ಸುರಕ್ಷಿತವಾಗಿರಬೇಕು. ಇವುಗಳನ್ನು ಉಪಯೋಗಿಸಿದ ಕಾರಣ ಅಲ್ಪಾವಧಿಯಾಗಲಿ, ದೀರ್ಘಾವಧಿಯದಾಗಲಿ ದುಷ್ಪರಿಣಾಮ, ಹಾನಿ ಯಾ ನಷ್ಟ ಉಂಟಾಗಬಾರದು. ಈ ಸುರಕ್ಷಿತವಾದ ವಸ್ತು / ಸೇವೆಗಳನ್ನು ಪಡೆಯುವ ಹಕ್ಕು ಅತಿ ಪ್ರಮುಖವಾದದ್ದು. ಯಾಕೆಂದರೆ, ಆರಿಸಿ ಪಡೆದುಕೊಳ್ಳುವ ಹಕ್ಕನ್ನು ಚಲಾಯಿಸಿದಾಗ ಪಡೆದ ವಸ್ತು ಯಾ ಸೇವೆ ನಮಗೆ ಹಾನಿ ಉಂಟುಮಾಡುವುದಾಗಿರಬಹುದು. ಉದಾಹರಣೆಗೆ ಬಣ್ಣ – ಬಣ್ಣದ ಸಿಹಿ ತಿಂಡಿಗಳಲ್ಲಿ ಆರಿಸಿ, ಅತ್ಯಾಕರ್ಷಕವಾದದನ್ನು ಪಡೆದುಕೊಂಡಾಗ, ಅದರಲ್ಲಿ ನಿಷೇಧಿತ ಬಣ್ಣವಿರಬಹುದು. ಸೇವಿಸಿದಾಗ ರುಚಿಯಾಗಿರುವ ಇದರಲ್ಲಿ ಇರುವ ಕೋಲ್‌ಟಾರ್ ಬಣ್ಣದಿಂದ, 20 ವರ್ಷಗಳ ಮೇಲೆ ಮೂತ್ರಕೋಶದ ಕ್ಯಾನ್ಸರ್ ಉಂಟಾದಾಗಲೇ ಅದರ 'ಮಹಿಮೆ' ಗೊತ್ತಾಗುವುದು!

ಈ ಹಕ್ಕಿನ ಉಲ್ಲಂಘನೆಗಳು ನಮ್ಮ ದೈನಂದಿನ ಜೀವನದಲ್ಲಿ ಸಹಸ್ರಾರು ನಡೆಯುತ್ತಿರುತ್ತವೆ. ಆಹಾರ ಕಲಬೆರಕೆ, ಔಷಧ ಕಲಬೆರಕೆ, ಹಾನಿಕಾರಕವಾಗಬಹುದಾದ ಔಷಧಗಳು ಇತ್ಯಾದಿ.

ನಮ್ಮ ಸರಕಾರಗಳಿಗೂ ಈ ಬಗ್ಗೆ ಅಸಡ್ಡೆ ಹಾಗೂ ತಾರತಮ್ಯ. ಕೆಲವು ಬಳಕೆದಾರರು ಉಳಿದವರಿಗಿಂತ ಹೆಚ್ಚು ಸಮಾನರು. ಸರಕಾರಿ ಆಸ್ಪತ್ರೆಗಳ ದುಷ್ಪರಿಣಾಮದ ಔಷಧಗಳಿಂದ ಸಾಮಾನ್ಯರು ಸತ್ತರೂ ಅದು ಲೆಕ್ಕಕ್ಕಿಲ್ಲ! ಅದೇ







'ದೊಡ್ಡ' ಮನುಷ್ಯರಿಗೇನಾದರೂ ಆದರೆ ಕೂಡಲೇ ನ್ಯಾಯಾಂಗ ತನಿಖೆ ಇತ್ಯಾದಿ ನಡೆಯುತ್ತವೆ!

ಕೆಲವು ಸಂದರ್ಭಗಳಲ್ಲಿ ಸರಕಾರವೇ ಈ ಹಕ್ಕಿನ ಉಲ್ಲಂಘನೆಗಳಿಗೆ ಉತ್ತೇಜನ ನೀಡುತ್ತದೆ. ಎಲ್.ಪಿ.ಜಿ. (ಅಡುಗೆ ಅನಿಲ) ಬಳಕೆದಾರರು ಆಗಾಗ ರಾಷ್ಟ್ರೀಯ, ಸ್ಥಳೀಯ ಪತ್ರಿಕೆಗಳಲ್ಲಿ ಬರುತ್ತಿದ್ದ ಜಾಹೀರಾತುಗಳನ್ನು ಗಮನಿಸಿರಬೇಕು. ಇವುಗಳಲ್ಲಿ ನಿಮ್ಮ ಒಲೆಗೆ ನೀವೇ ಅನಿಲದ ಜಾಡಿಯನ್ನು ಜೋಡಿಸಬೇಡಿ, ಅದನ್ನು ವಿತರಕರ ವಿಶೇಷ ತರಬೇತಿ ಪಡೆದ 'ತಂತ್ರಜ್ಞ'ರೇ ಮಾಡಬೇಕೆಂದು ಡಂಗುರ ಹೊಡೆಯುತ್ತಿದ್ದ ತೈಲ ಕಂಪೆನಿಗಳು, ಒಮ್ಮಿಂದೊಮ್ಮೆಯೇ ಕ್ಯಾಶ್–ಎಂಡ್–ಕ್ಯಾರಿ ಎಂಬ ಯೋಜನೆಯನ್ನು ತಂದುವು. ಇದರ ಪ್ರಕಾರ, ಬಳಕೆದಾರರು ಅಡುಗೆ ಅನಿಲ ಜಾಡಿಗಳನ್ನು ವಿತರಕರಿಂದ ತಾವೇ ಪಡೆದು, ಒಲೆಗೆ ತಾವೇ ಜೋಡಿಸಿಕೊಳ್ಳಬೇಕಂತೆ! ಅನಾಹುತಗಳಾದರೆ?. ಬಳಕೆದಾರರು ಈ ಯೋಜನೆಗೆ ಸೇರುವ ಮೊದಲೇ ತೈಲ ಕಂಪನಿಗೆ, ಇಂತಹ ಸಂದರ್ಭಗಳಲ್ಲಿ ತಾವೇ (ಬಳಕೆದಾರರೇ) ಹೊಣೆಗಾರರೆಂಬ ಒಪ್ಪಂದವನ್ನು ಸ್ಟಾಂಪು ಕಾಗದದಲ್ಲಿ ಬರೆದು, ಸಹಿ ಹಾಕಿ ಕೊಡಬೇಕಂತೆ! ಹಾಗಾದರೆ ಸುರಕ್ಷತೆಯ ಹಕ್ಕೆಲ್ಲಿ? ಕಾಳಜಿಯೆಲ್ಲಿ?

ಖಾಸಗಿಯವರೇನೂ ಇದಕ್ಕೆ ಅಪವಾದವಲ್ಲ. ಕೆಲವು ವರ್ಷಗಳ ಹಿಂದೆ ನವದೆಹಲಿಯ ಸ್ಥಳೀಯ ಪ್ರಾಧಿಕಾರವು, ಗೃಹೋಪಯೋಗಿ ವಿದ್ಯುತ್ ಉಪಕರಣಗಳಿಗೆ ಐ.ಎಸ್.ಐ. (ಈಗಿನ ಬಿ.ಐ.ಐಸ್) ಗುರುತನ್ನು ಕಡ್ಡಾಯ ಮಾಡುವ ಆಲೋಚನೆ ಮಾಡಿತ್ತು. ಆಗ, ಇದಕ್ಕೆ ತಯಾರಕರ ತೀವ್ರವಾದ ಪ್ರತಿಭಟನೆ ಕಂಡು ಬಂತು. ಕಾರಣ – ಈ ಗುಣಮಟ್ಟಗಳಿಗೆ ಸರಿಯಾದ ಉಪಕರಣಗಳನ್ನು ತಯಾರಿಸಿದಲ್ಲಿ ಬೆಲೆ ಹೆಚ್ಚಾಗುವುದಂತೆ! ಅರ್ಥಾತ್, ಈ ತಯಾರಕರಿಗೆ ಬಳಕೆದಾರರ ಪ್ರಾಣಗಳಿಗಿಂತ ತಮ್ಮ ಲಾಭದ ಚಿಂತೆಯೇ ಹೆಚ್ಚು! ಈಗ, ಈ ಗುರುತು ಕಡ್ಡಾಯವಾಗುವ ಆಜ್ಞೆಯನ್ನು ಕೇಂದ್ರ ಸರಕಾರವೇ ಹೊರಡಿಸಿದೆ.

ಒಟ್ಟಿನಲ್ಲಿ ಸಾಮಾನ್ಯ ಬಳಕೆದಾರರ ಸುರಕ್ಷಿತತೆಯ ಹಕ್ಕಿನ ಬಗ್ಗೆ ಕಾಳಜಿ ವಹಿಸುವವರು ತೀರಾ ಕಡಿಮೆ!





### 3. ಮಾಹಿತಿ ಪಡೆಯುವ ಹಕ್ಕು :

ನಾವು ಪಡೆಯುವ ವಸ್ತು ಯಾ ಸೇವೆಗಳ ಬಗ್ಗೆ ಮಾಹಿತಿ ಪಡೆಯುವ ಹಕ್ಕು ಬಳಕೆದಾರರಿಗಿದೆ. ಈ ಮಾಹಿತಿಯನ್ನು ಪಡೆಯುವುದರಿಂದ ವಸ್ತುವನ್ನು ಆರಿಸಲು, ಸುರಕ್ಷಿತತೆಯ ಬಗ್ಗೆ ನಿರ್ಧರಿಸಲು, ಬೆಲೆ ಯೋಗ್ಯವೇ ಎಂದು ತಿಳಿಯಲು ಬಳಕೆದಾರರಿಗೆ ಅವಕಾಶವಿದೆ. ಇದಲ್ಲದೆ, ಸೇವೆಯ ಉಪಯೋಗ ಪಡೆಯುವವರಿಗೆ



ಸೇವೆಯನ್ನು ಕೊಡುವ ಪೂರೈಕೆದಾರನ ಪ್ರಾವೀಣ್ಯ, ಕಾರ್ಯದಕ್ಷತೆಯ ಬಗ್ಗೆ ತಿಳಿಯುವ ಅವಕಾಶವಿದೆ.

ಈ ಬಗ್ಗೆ ಗಮನ ಹರಿಸೋಣ. ಕ್ಲಿಯೋಕ್ವಿನಾಲ್ ಎಂಬ ಔಷಧವಿದೆ. ಇದನ್ನು ಎಂಟರೋ ವಯೋಫಾರ್ಮಾ ಎಂಬ ಹೆಸರಿನಲ್ಲಿ ಸೀಬಾ – ಗೈಗಿ ಕಂಪೆನಿಯು ಮಾರಾಟ ಮಾಡುತ್ತಿದೆ. ಇದರ ಮೇಲೆ 'Prolonged use of halogenated quinols has been shown to cause SMOW' ಎಂಬ ಶಬ್ದಗಳು ಭೂತಗನ್ನಡಿಯಿಂದ ನೋಡಿದರೂ ಕಾಣಲು ಕಷ್ಟವಾಗುವಷ್ಟು ಚಿಕ್ಕದಾಗಿ ಮುದ್ರಿತವಾಗಿವೆ. ಇದರ ಅರ್ಥವೇನು? ಈ ಮಾತ್ರೆಯನ್ನು ದೀರ್ಘಕಾಲ ಸೇವಿಸಿದಲ್ಲಿ ಬಳಕೆದಾರರ ದೃಷ್ಟಿ ಹೋಗುವ ಸಾಧ್ಯತೆಯಿದೆ. ಜಪಾನ್‌ನಲ್ಲಿ ಈ ಮಾತ್ರೆಗಳನ್ನು ಸೇವಿಸಿದ ಸಾವಿರಾರು ಮಂದಿ ಕಣ್ಣು ಕಳೆದುಕೊಂಡರು. ತಂತಾನೇ ವಾಸಿಯಾಗುವ ಭೇಧಿಯನ್ನು ನಿಲ್ಲಿಸಲು ಈ ಔಷಧಿಯನ್ನು ಸೇವಿಸಿ ಅಂಧರಾದರು! ಈ ಮಾತ್ರೆ ಸೇವಿಸಿ ನಮ್ಮ ಭಾರತದಲ್ಲಿ ಎಷ್ಟು ಮಂದಿ ತಮ್ಮ ದೃಷ್ಟಿ ಕಳೆದುಕೊಂಡಿರಬಹುದು?

ಸರಕಾರಿ ಕಚೇರಿಗೆ ಹೋಗಿ. ಫಾರ್ಮುಗಳನ್ನು ಕೇಳಿದರೆ ಹೊರಗೆ ಮರದಡಿಯಲ್ಲಿ ಕುಳಿತಿರುವ ದಲ್ಲಾಳಿಯನ್ನು ತೋರಿಸುತ್ತಾರೆ. ಕಚೇರಿಯಲ್ಲಿ ದೊರೆಯದ ಫಾರ್ಮುಗಳು ಇವರ ಬಳಿಯಿವೆ! ಭರ್ತಿ ಮಾಡಲು ಮಾಹಿತಿ ಇವರೇ ಕೊಡುತ್ತಾರೆ! ಪೋಲೀಸು ಠಾಣೆಗಳಿಗೆ ದೂರು ಸಲ್ಲಿಸಲು ಬಳಕೆದಾರರು ಹೋದರೆ, ಅಲ್ಲಿಯೂ ಇದೇ ರೀತಿಯ ತೊಂದರೆಗಳು.

ಖಾಸಗಿ ಸೇವೆಗಳು ಹೇಗಿವೆ? ವೈದ್ಯಕೀಯ ಸೇವೆಗಳಲ್ಲಿ "ಡಾ||" ಎಂಬ ಪದವನ್ನು ತಮ್ಮ ಹೆಸರಿನ ಮುಂದೆ ಸೇರಿಸಿಕೊಂಡ, "ವಿಶ್ವ ವಿಖ್ಯಾತ", ವಿಧ – ವಿಧದ ಡಿಗ್ರಿಗಳನ್ನು ಪಡೆದ 'ವೈದ್ಯ' ಶಿರೋಮಣಿಗಳು ಇರುತ್ತಾರೆ. ಮಾಹಿತಿ ಪಡೆಯಲು ಬಳಕೆದಾರರು ನಿಮ್ಮ ಅರ್ಹತೆಯೇನೆಂದು ಪ್ರಶ್ನಿಸಿದರೆ ನಿಮಗೆ ಡಿಗ್ರಿ ಬೇಕೋ, ಗುಣಬೇಕೋ ಎಂಬ ಉತ್ತರ ಬರುತ್ತದೆ! ಇಲೆಕ್ಟ್ರೋ ಹೋಮಿಯೋಪತಿ, ಮ್ಯಾಗ್ನೆಟೊಥಿರಾಪಿ, ಆಕ್ಯುಪಂಕ್ಚರ್ ಇತ್ಯಾದಿಗಳ ಬೋಗಸ್ ಡಿಗ್ರಿಗಳನ್ನು ತಮ್ಮ ಹೆಸರಿನ ಮುಂದೆ ಹಾಕಿರುವ ಈ 'ಡಾಕ್ಟರ್'ಗಳು ಬಳಕೆದಾರರನ್ನು ಮೋಸಗೊಳಿಸುವುದು ಖಂಡಿತ!

ಕೆಲವು ತಯಾರಕರು ಈ ಬಳಕೆದಾರರ ಮಾಹಿತಿ ಪಡೆಯುವ ಹಕ್ಕನ್ನು ಪರಿವರ್ತಿಸಿಕೊಂಡು, ತಪ್ಪು ಮಾಹಿತಿ ಕೊಡುವುದು ತಮ್ಮ ಹಕ್ಕೆಂದು ಮಾಡಿಕೊಂಡಿದ್ದಾರೆ! ಈ ಬಗ್ಗೆ ಹೆಚ್ಚಿನ ಮಾಹಿತಿ, 'ರಂಗುರಂಗಿನ ಜಾಹೀರಾತುಗಳಿಗೆ ಮರುಳಾಗದಿರಕ್ಕ' ಅಧ್ಯಾಯದಲ್ಲಿದೆ :







## 4. ಪ್ರದೂಷಣೆಯಿಲ್ಲದ, ಸ್ವಚ್ಛವಾದ ಪರಿಸರ, ಗಾಳಿ, ನೀರನ್ನು ಪಡೆಯುವ ಹಕ್ಕು :

ಸ್ವಚ್ಛವಾದ ಪರಿಸರ, ಗಾಳಿ, ನೀರನ್ನು ಪಡೆಯುವ ಹಕ್ಕು ಬಳಕೆದಾರರಿಗೆ ಇದೆ. ಈ ಹಕ್ಕಿನ ಉಲ್ಲಂಘನೆ ಇವುಗಳನ್ನು ಮಲಿನ ಮಾಡುವವರಿಂದಾಗುತ್ತದೆ. ಜಲ ಮಾಲಿನ್ಯ, ವಾಯು ಮಾಲಿನ್ಯ, ಪರಿಸರ ಮಾಲಿನ್ಯ ಹಾಗೂ ಶಬ್ದ ಮಾಲಿನ್ಯದಿಂದಾಗಿ ಈ ಹಕ್ಕಿನ ಉಲ್ಲಂಘನೆಯಾಗುತ್ತದೆ.

ದೀರ್ಘಾವಧಿ ದುಷ್ಪರಿಣಾಮಗಳು ಹಾಗೂ ಸ್ಥಳದಲ್ಲೇ ಸಾಯುವ ಪರಿಸ್ಥಿತಿಯೂ ವಾಯುಮಾಲಿನ್ಯದಿಂದಾಗಿ ಉಂಟಾಗಬಹುದು. ಇಂತಹ ಮಾಲಿನ್ಯದ ಅತಿ ಘೋರ ದುರಂತ ಭೋಪಾಲ್‌ನಲ್ಲಿ ನಡೆದು ಸಾವಿರಾರು ಮಂದಿ ಪ್ರಾಣಗಳನ್ನು ಕಳೆದುಕೊಂಡು ಲಕ್ಷದಷ್ಟು ಮಂದಿ ನಿಶ್ಶಕ್ತರಾಗಿದ್ದಾರೆ. ಹೊಗೆಯುಗುಳುವ ಕಾರ್ಖಾನೆಗಳು, ವಾಹನಗಳು ಇತ್ಯಾದಿ ಇದೇ ರೀತಿ ಬಳಕೆದಾರರನ್ನು ದುಷ್ಪರಿಣಾಮಗಳಿಗೆ ಈಡು ಮಾಡುತ್ತವೆ. ಮುಚ್ಚಿದ ಸ್ಥಳಗಳಲ್ಲಿ ಹೊಗೆಬತ್ತಿ ಸೇವಿಸುವವರು ಹತ್ತಿರದಲ್ಲಿರುವವರಿಗೆ 'ಉಚಿತ'ವಾಗಿ ಕ್ಯಾನ್ಸರ್‌ನ ದಾನ ಮಾಡುತ್ತಿರುತ್ತಾರೆ!

ಜಲಮಾಲಿನ್ಯದಿಂದಾಗಿ ಮಾನವರಿಗೂ, ಸಸ್ಯ–ಪ್ರಾಣಿಗಳಿಗೂ ಬಹಳಷ್ಟು ತೊಂದರೆಗಳುಂಟಾಗುತ್ತವೆ! ಇದರಲ್ಲಿರುವ ವಿಷ ಪದಾರ್ಥಗಳು ಹಾಲು, ಮಾಂಸ, ಸಸ್ಯಜನ್ಯ ಉತ್ಪನ್ನಗಳನ್ನು ಸೇವಿಸುವ ಮನುಷ್ಯರ ಮೇಲೂ ದುಷ್ಪರಿಣಾಮಗಳು ಬರುತ್ತವೆ. ಕೀಟನಾಶಕಗಳು, ತ್ಯಾಜ್ಯವಸ್ತುಗಳು, ರಾಸಾಯನಿಕಗಳು ನೀರನ್ನು ಸೇರಿ ಅದನ್ನು ಮಲಿನಗೊಳಿಸುತ್ತವೆ. ಕರ್ನಾಟಕದಲ್ಲಿ ಇಂತಹ ಹಲವಾರು ನಿದರ್ಶನಗಳಿವೆ. ಉದಾಹರಣೆ : ಹರಿಹರ ಪಾಲಿಫೈಬರ್ಸ್‌ನ ಕಾರ್ಖಾನೆಯು ತುಂಗಭದ್ರ ನದಿಯ ನೀರನ್ನು ಕಲುಷಿತಗೊಳಿಸಿ ಅಲ್ಲಿನ ಬೆಸ್ತರಿಗೆ, ರೈತರಿಗೆ ಸಾಕಷ್ಟು ತೊಂದರೆ ಉಂಟು ಮಾಡಿದೆ.

ಶಬ್ದ ಮಾಲಿನ್ಯವು ಮನುಷ್ಯನ ಆರೋಗ್ಯದ ಮೇಲೆ ಹಲವಾರು ರೀತಿಯ ದುಷ್ಪರಿಣಾಮಗಳನ್ನುಂಟು ಮಾಡುವುದು. ನಿದ್ರಾಹೀನತೆ, ಕಾಯಿಲೆಗಳು, ದೇಹದ ರೋಗ ನಿರೋಧ ಶಕ್ತಿಯು ಕುಂದುವುದು ಇತ್ಯಾದಿ.



## 5. ಹಕ್ಕುಗಳ ಉಲ್ಲಂಘನೆಗಳಾದಾಗ ಸಂಬಂಧಪಟ್ಟವರಿಗೆ ತಿಳಿಸುವ ಹಕ್ಕು :



ಈ ಹಕ್ಕಿನ ಉಪಯೋಗದಿಂದ, ಪರಿಸ್ಥಿತಿಯನ್ನು ಸರಿಪಡಿಸಲು ಸಾಧ್ಯವಿದೆ. ಈ ಹಕ್ಕಿನ ಉಲ್ಲಂಘನೆ ಹೆಚ್ಚಾಗಿ ಸರಕಾರದಿಂದಾಗುತ್ತದೆ. ಏಕೆಂದರೆ, ಹೆಚ್ಚಿನ ಸಂದರ್ಭಗಳಲ್ಲಿ ನಿಯಂತ್ರಿಸುವ, ನಿಷೇಧಿಸುವ, ಕಾನೂನು ಕ್ರಮ ಕೈಗೊಳ್ಳುವ ಅಧಿಕಾರ ಸರಕಾರಕ್ಕಿದೆ.



ಪತ್ರಗಳಿಗೆ ಉತ್ತರಿಸದ, ದೂರುಗಳನ್ನು ಸ್ವೀಕರಿಸಲು ನಿರಾಕರಿಸುವ, ಬಳಕೆದಾರರಿಗೆ ಭೇಟಿ ನಿರಾಕರಿಸುವ ಅಧಿಕಾರಿಗಳಿಂದಾಗಿ ಈ ಹಕ್ಕಿನ ಉಲ್ಲಂಘನೆಗಳಾಗುತ್ತವೆ. ಅಧಿಕಾರಿಗಳು ಬಳಕೆದಾರರಿಗೆ ಇಡೀ ದಿನ ಭೇಟಿಯಾಗಲು ಅವಕಾಶ ಕೊಡಬೇಕಾಗಿಲ್ಲ. ಅದಕ್ಕೆ ನಿರ್ದಿಷ್ಟ ವೇಳೆಯನ್ನು ನಿಗದಿಪಡಿಸಿ, ಆ ಸಮಯದಲ್ಲಿ ಸಂಬಂಧ ಪಟ್ಟ ಅಧಿಕಾರಿ ಯಾ ಕ್ರಮ ಕೈಗೊಳ್ಳಲು ಅಧಿಕಾರವಿರುವ ವ್ಯಕ್ತಿ ಬಳಕೆದಾರರನ್ನು ಭೇಟಿಯಾಗಲು ಸಿದ್ಧರಿರಲೇಬೇಕು. ಬಳಕೆದಾರರು ಕೊಟ್ಟ ಪತ್ರಗಳಿಗೆ ಧೃಡೀಕರಣ (acknowledgement) ಪಡೆಯುವ ಅಧಿಕಾರವೂ ಬಳಕೆದಾರನಿಗೆ ಇದೆ. ದೂರು ಸಲ್ಲಿಸಿದಾಗ ಅದನ್ನು ಸಲ್ಲಿಸಿದ ಬಗ್ಗೆ ದಾಖಲೆಯಿಲ್ಲದಾಗ ಅದು ಬಂದದ್ದೇ ಇಲ್ಲವೆಂದು ವಾದಿಸಲು ಸಾಧ್ಯವಿದೆ. ಪೊಲೀಸು ಅಧಿಕಾರಿಗಳಿಗೆ ಸಲ್ಲಿಸಿದ ದೂರುಗಳಿಗೆ ಅವರು ಧೃಢೀಕರಣ ಕೊಡಬೇಕು. ಆದರೆ, ದೂರನ್ನು ತೆಗೆದುಕೊಳ್ಳಲು ನಿರಾಕರಿಸುವ ಮೂಲಕ ಈ ಹಕ್ಕಿನ ಉಲ್ಲಂಘನೆಗಳಾಗುತ್ತವೆ.

### 6. ಪರಿಹಾರ ಪಡೆಯುವ ಹಕ್ಕು :

ತಮ್ಮ ಹಕ್ಕುಗಳ ಉಲ್ಲಂಘನೆಯಾದಾಗ ಪರಿಹಾರ ಪಡೆಯುವ ಹಕ್ಕು ಬಳಕೆದಾರರಿಗಿದೆ. ಮೇಲ್ಕಾಣಿಸಲಾದ ತಿಳಿಸುವ ಹಕ್ಕು ಮತ್ತು ಪರಿಹಾರ ಪಡೆಯುವ ಹಕ್ಕು ಒಂದೇ ನಾಣ್ಯದ ಎರಡು ಮುಖಗಳು. ದೂರು ಕೊಟ್ಟರೆ ತಾನೇ ಪರಿಹಾರ'

ಈ ಹಕ್ಕಿನ ಉಪಯೋಗದಿಂದ ಗ್ರಾಹಕನಿಗಾದ ಅನ್ಯಾಯಗಳನ್ನು ಸರಿಪಡಿಸಿಕೊಳ್ಳಲು ಸಾಧ್ಯ. ಉದಾಹರಣೆ : ಖರೀದಿಸಿದ ವಸ್ತುವಿನಿಂದ ಇನ್ನೊಂದು ವಸ್ತು ಹಾಳಾದರೆ ಎರಡಕ್ಕೂ ಪರಿಹಾರ ಸಿಗಬೇಕು. ಒಬ್ಬರು ವೋಲ್ಟೇಜ್ ಸ್ಟೆಬಿಲೈಜರ್ ಖರೀದಿಸಿ, ಫ್ರಿಜ್‌ಗೆ ಜೋಡಿಸಿದ್ದರು. ಇದರ ದೋಷದಿಂದಾಗಿ ಎರಡೂ ಸುಟ್ಟು, ಮನೆಗೂ ಹಾನಿಯಾಯಿತು. ಈ ಸಂದರ್ಭದಲ್ಲಿ ಸ್ಟೆಬಿಲೈಜರ್‌ನ ತಯಾರಕರು ಮೂರು ಹಾನಿಗಳಿಗೂ ಪರಿಹಾರ ಕೊಡಬೇಕಾಯಿತು. ಈ ಪರಿಹಾರದ ಮೊತ್ತ ಸ್ಟೆಬಿಲೈಜರ್‌ನ ಬೆಲೆಯ ಹಲವಾರು ಪಟ್ಟಾಯಿತು.

ಪರಿಹಾರ ಪಡೆಯುವ ಹಕ್ಕಿನಿಂದ ವಸ್ತು / ಸೇವೆಯಲ್ಲಿರುವ ಕುಂದು ಕೊರತೆಗಳನ್ನು ಸರಿಪಡಿಸಿಕೊಳ್ಳಬಹುದು. ಉದಾಹರಣೆಗೆ ಗ್ಯಾರಂಟಿ ಅವಧಿಯಲ್ಲಿ ರಿಪೇರಿ ಮಾಡಿಕೊಡಲು ನಿರಾಕರಿಸಿದ ತಯಾರಕ / ಮಾರಾಟಗಾರನನ್ನು ಈ ಹಕ್ಕಿನ ಮೂಲಕ ಅದನ್ನು ಸರಿಪಡಿಸುವಂತೆ ಮಾಡಿಸಲು ಸಾಧ್ಯ.

ಸರಕಾರಿ ಕಚೇರಿಯಲ್ಲಿ ನಮಗೆ ಬೇಕಾದ ದಾಖಲೆ ಸಿಗದೆ ಹೋದಲ್ಲಿ, ಈ ಹಕ್ಕಿನ ಉಪಯೋಗದಿಂದ ಅದನ್ನು ಪಡೆಯಬಹುದು. ಈ ಹಕ್ಕಿನ ಸ್ಥಾಪನೆಯ ಉದ್ದೇಶದಿಂದ ಬಳಕೆದಾರರ ರಕ್ಷಣಾ ಕಾಯಿದೆ, 1986ರಲ್ಲಿ ರಚಿತವಾಗಿದೆ. ಇದರ ಬಗ್ಗೆ ವಿವರಗಳು ಇದೇ ಪುಸ್ತಕದ ಬೇರೆಡೆಯಲ್ಲಿವೆ.







## 7. ಹಕ್ಕುಗಳ ಬಗ್ಗೆ ಶಿಕ್ಷಣ ಪಡೆಯುವ ಹಕ್ಕು :

ಬಳಕೆದಾರರಿಗಿರುವ ಈ ಹಕ್ಕು ಅತಿ ಮಹತ್ವದಾಗಿದೆ. ಇದರ ಮೂಲಕ ನಮಗೆ ಈ ಹಕ್ಕುಗಳಿವೆಯೆಂಬ ತಿಳುವಳಿಕೆ ಸಿಗುವುದು. ನಂತರ, ನಮ್ಮ ಹಕ್ಕುಗಳಿಗಾಗಿ ನಾವು ಕೇಳಬಹುದು. ಆದರೆ, ಈ ಹಕ್ಕಿನ ಬಗ್ಗೆ ಸರಕಾರಿ ಯಂತ್ರಗಳಾಗಲಿ, ಖಾಸಗಿಯವರಾಗಲಿ ತಲೆ ಕೆಡಿಸಿಕೊಂಡಿಲ್ಲ. ಈ ಬಗ್ಗೆ ಶಿಕ್ಷಣ ಕೊಟ್ಟರೂ ಅದು ಅರೆ ಮನಸ್ಸಿನ ಕಾಟಾಚಾರದ ಪ್ರಯತ್ನ ಮಾತ್ರ.

ಇದಕ್ಕೆ ಕಾರಣವೇನು? ಬಳಕೆದಾರರ ಶೋಷಣೆ, ಸರಕಾರದ ಪ್ರತ್ಯಕ್ಷ ಯಾ ಪರೋಕ್ಷ ಅನುಮತಿ / ಸಮ್ಮತಿಯಿಂದಲೇ ನಡೆಯುತ್ತದೆ. ಆರ್ಥಿಕ ಉದಾರೀಕರಣದ ನೆಪದಲ್ಲಿ ಬಳಕೆದಾರರ ಶೋಷಣೆಯಾಗುವ ಸಾಧ್ಯತೆಗಳು ಇವೆ. ಖಾಸಗಿಯವರು ನಡೆಸುವ ಶೋಷಣೆ ಸರಕಾರಕ್ಕೆ ತಿಳಿದಿದ್ದರೂ ದಿವ್ಯ ನಿರ್ಲಕ್ಷ್ಯ ತೋರಿಸುವುದು. ತತ್ಕಾರಣ, ಬಳಕೆದಾರರು ಎಚ್ಚೆತ್ತರೆ ಈ ಸ್ಥಾಪಿತ ಹಿತಾಸಕ್ತಿಗಳಿಗೆ ಬಲವಾದ ಪೆಟ್ಟು ಬೀಳುವುದು. ಬಳಕೆದಾರರ ಆಂದೋಲನವೆಂದರೆ ಶೋಷಣೆ, ಅಸಮಾನತೆಯ ವಿರುದ್ಧ ಹೋರಾಟವಾಗಿದೆ. ಇದಕ್ಕೆ, ಯಾವ ಸ್ಥಾಪಿತ ಹಿತಾಸಕ್ತಿಯೂ ಸಿದ್ಧವಿಲ್ಲ. ತತ್ಕಾರಣ, ಬಳಕೆದಾರರ ಹಕ್ಕುಗಳ ಬಗ್ಗೆ ಶಿಕ್ಷಣ ಕೊಡಲು ಸರಿಯಾದ ಪ್ರಯತ್ನಗಳು ಯಾವತ್ತೂ ನಡೆದಿಲ್ಲ. ಈ ಬಗ್ಗೆ ಕೆಲವು ಖಾಸಗಿ ಸಂಘಟನೆಗಳು, ವ್ಯಕ್ತಿಗಳು ಮಾತ್ರ ನಿರಂತರವಾಗಿ ಹೋರಾಡುತ್ತಲೇ ಇದ್ದಾರೆ.

ಪ್ರತಿಯೊಬ್ಬ ಬಳಕೆದಾರರಿಗೂ, ಆಂದೋಲನದ ಕಾರ್ಯಕರ್ತರಿಗೂ ಈ ಹಕ್ಕುಗಳ ಬಗ್ಗೆ ಮಾಹಿತಿ ಇರಲೇಬೇಕು.









# ಬಳಕೆದಾರರ ಸಮಸ್ಯೆಗಳುಂಟಾದಾಗ

ಬಳಕೆದಾರರ ಸಮಸ್ಯೆಗಳು ಹುಟ್ಟಿಕೊಂಡಾಗ ಅವುಗಳಿಗೆ ಪರಿಹಾರ ಪಡೆಯಲು ಕಾರ್ಯೋನ್ಮುಖರಾಗುವುದು ಅಗತ್ಯ. ಈ ಸಮಸ್ಯೆಗಳ ಬಗ್ಗೆ, ಪರಿಹಾರ ವಿಧಾನಗಳ ಬಗ್ಗೆ ಸ್ಪಷ್ಟವಾದ ಮಾಹಿತಿಯನ್ನು ಪಡೆದ ಬಳಿಕವೇ ಪರಿಹಾರಕ್ಕೆ ಪ್ರಯತ್ನಿಸುವುದು ಸೂಕ್ತ.

ಯಾರಾದರೊಬ್ಬರು ಬಳಕೆದಾರರೊಂದು ಸಮಸ್ಯೆಯೊಂದಿಗೆ ಬಂದರೆಂದುಕೊಳ್ಳೋಣ. ಆಗ, ಮೊದಲನೆಯದಾಗಿ ಇದು ಬಳಕೆದಾರರ ಆಂದೋಲನದ ಕಾರ್ಯವ್ಯಾಪ್ತಿಯಲ್ಲಿ ಬರುವುದೇ ಎಂದು ಪರಿಶೀಲಿಸಬೇಕು. ಇದು ನಮ್ಮ ಕಾರ್ಯ ವ್ಯಾಪ್ತಿಯೊಳಗೆ ಬರಬೇಕಾದಲ್ಲಿ ಬಳಕೆದಾರ – ಪೂರೈಕೆದಾರ ಸಂಬಂಧವು ಕಡ್ಡಾಯವಾಗಿ ಇರಲೇಬೇಕು. ಇದಲ್ಲದೆ, ಬಳಕೆದಾರರ ಯಾವುದಾದರೂ ಒಂದು ಹಕ್ಕಿನ ಉಲ್ಲಂಘನೆಯಾಗಿರಬೇಕು. ಇವೆಲ್ಲವನ್ನೂ ಸ್ಪಷ್ಟವಾಗಿ ಮನವರಿಕೆ ಮಾಡಿಕೊಂಡ ಬಳಿಕ, ಪರಿಹಾರಕ್ಕೆ ಉಪಾಯಗಳನ್ನು ಹುಡುಕಬಹುದು.

ಬಳಕೆದಾರರೊಬ್ಬರು ತಮ್ಮ ಮನೆಗೆ ನೀರು ಬರುವುದಿಲ್ಲವೆಂಬ ಸಮಸ್ಯೆಯನ್ನು ನಮ್ಮಲ್ಲಿ ತರುತ್ತಾರೆ. ಈ ಬಗ್ಗೆ ಕಾರ್ಯೋನ್ಮುಖರಾಗುವುದು ಹೇಗೆ? ಮೊದಲನೆಯದಾಗಿ, ಪೂರೈಕೆದಾರರು ಯಾರೆಂಬುದನ್ನು ಗಮನಿಸಬೇಕು. ಇಲ್ಲಿ ಮಹಾನಗರ ಪಾಲಿಕೆ / ನಗರ ಸಭೆ / ಮಂಡಲ್ ಪಂಚಾಯತ್‌ಗಳು ಪೂರೈಕೆದಾರರಾಗಿರುವ ಕಾರಣ, ಸಮಸ್ಯೆಯನ್ನು ಬಗೆಹರಿಸಲು ಮುಂದಾಗಬಹುದು. ಇಲ್ಲಿ ಬಳಕೆದಾರರ ಸರಿಯಾದ ಗುಣಮಟ್ಟದ ವಸ್ತು / ಸೇವೆಯನ್ನು ಪಡೆಯುವ ಹಕ್ಕಿನ ಉಲ್ಲಂಘನೆಯಾಗಿದೆ. ತತ್ಕಾರಣ, ಈ ಸಮಸ್ಯೆ ನಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವುದು.

ಇನ್ನೊಬ್ಬ ಬಳಕೆದಾರರು ನಮ್ಮಲ್ಲಿ ಸಮಸ್ಯೆಯೊಂದನ್ನು ತರುತ್ತಾರೆ. ಅವರ ಅಣ್ಣ – ತಮ್ಮಂದಿರ ಮಧ್ಯೆ ಜಗಳವಾಗಿದೆ. ಆಸ್ತಿಯನ್ನು ನಾವು ಪಾಲುಮಾಡಿಕೊಡಲೇಬೇಕೆಂದು ಕೇಳಿಕೊಳ್ಳುತ್ತಾರೆ. ಇದು ಬಳಕೆದಾರರ ಸಮಸ್ಯೆಯಾಗುವುದೆ? ಖಂಡಿತವಾಗಿಯೂ ಇಲ್ಲ. ಯಾಕೆಂದರೆ ಇಲ್ಲಿ ಬಳಕೆದಾರರ – ಪೂರೈಕೆದಾರ ಸಂಬಂಧವನ್ನು ಕಲ್ಪಿಸಲು ಅಸಾಧ್ಯ. ಇದಲ್ಲದೆ, ಇಲ್ಲಿ ಬಳಕೆದಾರರ ಯಾವ ಹಕ್ಕಿನ ಉಲ್ಲಂಘನೆಯಾಗಿದೆಯೆಂದು ಹೇಳಲೂ ಸಾಧ್ಯವಿಲ್ಲ.







ಮತ್ತೊಬ್ಬ ಬಳಕೆದಾರರು ಟಿ.ವಿ.ಯೊಂದನ್ನು ಖರೀದಿಸಿದ್ದರು. ಗ್ಯಾರಂಟಿ ಅವಧಿಯೊಳಗೆ ಅದಕ್ಕೆ ಸಾಕಷ್ಟು ರಿಪೇರಿಗಳು ನಡೆದಿದ್ದರೂ ಅದು ಸರಿಯಾಗಿ ಕೆಲಸ ಮಾಡುತ್ತಿದ್ದಿಲ್ಲ. ಆದರೆ, ಅವರು ದೂರು ತಂದಾಗ ಗ್ಯಾರಂಟಿಯ ಅವಧಿಯು ಮುಗಿದಿತ್ತು. ಈ ಅವಧಿಯು ಮುಗಿದ ಕಾರಣ, ಸದರಿ ವಿಷಯವು ಬಳಕೆದಾರರ ಹಕ್ಕುಗಳ ಉಲ್ಲಂಘನೆಯೆ? ಇಲ್ಲಿ ಬಳಕೆದಾರ – ಪೂರೈಕೆದಾರ ಸಂಬಂಧವಿದೆಯೆ? ಎಂಬ ಪ್ರಶ್ನೆ ಉದ್ಭವವಾಯಿತು. ಇದು ಖಂಡಿತವಾಗಿಯೂ ಬಳಕೆದಾರರ ಸಮಸ್ಯೆ. ಯಾಕೆಂದರೆ, ಇಲ್ಲಿ ಬಳಕೆದಾರರು ಹಣ ಕೊಟ್ಟು ಟಿ.ವಿಯನ್ನು ಖರೀದಿಸಿದ್ದಾರೆ. ಮಾತ್ರವಲ್ಲದೆ, ಖರೀದಿಸಿದ ವಸ್ತು ಕಳಪೆ ಗುಣಮಟ್ಟದ್ದಾದ ಕಾರಣ, ಅದಕ್ಕೆ ಗ್ಯಾರಂಟಿ ಅವಧಿಯು ಮುಗಿದರೂ ಅದರ ರಿಪೇರಿ / ಬದಲಾಯಿಸಿ ಕೊಡುವ ಹೊಣೆಗಾರಿಕೆ ಪೂರೈಕೆದಾರರದ್ದು. ಅವರು ಕೊನೆಗೂ ಅದನ್ನು ಬದಲಾಯಿಸಿಕೊಟ್ಟು, ಗ್ರಾಹಕ ಹಿತರಕ್ಷಣಾ ಕಾಯಿದೆಯ ರೀತಿ ದಾವೆ ಹೂಡುವುದನ್ನು ತಪ್ಪಿಸಿಕೊಂಡರು.

ಬಳಕೆದಾರ – ಪೂರೈಕೆದಾರರನ್ನು ಗುರುತಿಸಿ, ಸಮಸ್ಯೆಯನ್ನು ಅರ್ಥೈಸಿಕೊಂಡು ಯಾವ ಹಕ್ಕಿನ ಉಲ್ಲಂಘನೆಯಾಗಿದೆಯೆಂದು ಗಮನಿಸುವುದು ಮೊದಲ ಹಂತ. ಈ ಹಂತದಲ್ಲಿ ಅಗತ್ಯವಿರುವ ದಾಖಲೆ ಇತ್ಯಾದಿಗಳನ್ನೂ ಗುರುತಿಸಿಟ್ಟುಕೊಳ್ಳಬೇಕು. ಬಳಿಕ, ಈ ಸಮಸ್ಯೆಯ ಪರಿಹಾರಕ್ಕೆ ಮಾರ್ಗವನ್ನು ಹುಡುಕಬೇಕು. ಇದು ಹೇಗೆಂದು ತಿಳಿಯುವುದು ಅಗತ್ಯ.



ಮೊದಲನೆಯದಾಗಿ ಬಳಕೆದಾರರ ದೂರನ್ನು ಸಂಬಂಧಪಟ್ಟ ಪೂರೈಕೆದಾರರಿಗೆ ಬರವಣಿಗೆಯಲ್ಲಿ ಕೊಡಬೇಕು. ಬರಹ ಮೂಲಕ ಕೊಡುವ ಅಗತ್ಯವೇನೆಂದರೆ, ಇದು ದೂರು ಕೊಟ್ಟ ದಾಖಲೆಯನ್ನು ಸೃಷ್ಟಿಸುತ್ತದೆ. ನಮ್ಮ ಹೆಚ್ಚಿನ ವ್ಯವಹಾರಗಳು ಬಾಯಿ ಮಾತಿನ ಮೂಲಕವೇ ನಡೆಯುವ ಕಾರಣ ಅಲ್ಲಿ ಸರಿಯಾದ ದಾಖಲೆಗಳು ಇರುವುದಿಲ್ಲ. ದೂರಿನ ಮಾದರಿ ಪತ್ರವನ್ನು ಕೆಳಗೆ ಕೊಟ್ಟಿದೆ.

............. ಊರು

ಇವರಿಂದ : ............. ದಿನಾಂಕ

...... (ಇಲ್ಲಿ ಬಳಕೆದಾರರ ಹೆಸರು)
ಮನೆ ನಂ. ......
..... ವಠಾರ
..... ಊರು



ಇವರಿಗೆ



ಮುಖ್ಯ ಅಭಯಂತರು / ಕಾರ್ಯದರ್ಶಿ

ಮಹಾ ನಗರಪಾಲಿಕೆ / ಪುರಸಭೆ / ಮಂಡಲ ಪಂಚಾಯತ್

..... ಊರು.

ಮಹನೀಯರೆ,

**ವಿಷಯ :** ನೀರಿನ ಪೂರೈಕೆ ಅಸಮರ್ಪಕವಾಗಿರುವ ಬಗ್ಗೆ ದೂರು.

ನಾನು ಮನೆ ನಂ. ...... ವಾಸವಾಗಿದ್ದು ನಿಮ್ಮ ಸೇವೆಗಳ ಬಳಕೆದಾರನಾಗಿರುತ್ತೇನೆ.

ನಮ್ಮ ಮನೆಯಲ್ಲಿ ಕಳೆದ .... ದಿನಗಳಿಂದ ನೀರು ಸರಿಯಾಗಿ ಬರುತ್ತಿಲ್ಲ. ಈ ಸಮಸ್ಯೆಯನ್ನು ಕೂಡಲೇ ಪರಿಹರಿಸಬೇಕಾಗಿ ಕೇಳಿಕೊಳ್ಳುತ್ತೇನೆ.

ಇತಿ ನಿಮ್ಮ ವಿಶ್ವಾಸಿ

ಯಥಾ ಪ್ರತಿ : ಬಳಕೆದಾರರ ಸಂಘಟನೆ

............. (ಇಲ್ಲಿ ಸಂಘಟನೆಯ ವಿಳಾಸ)

ಸದರಿ ಪತ್ರ ನೇರ, ಸರಳ, ಸ್ಪಷ್ಟವಾಗಿದ್ದು, ಇಲ್ಲಿ ಆಲಂಕಾರಿಕ ಭಾಷೆಯಾಗಲಿ, ಸರಕಾರಿ ನೌಕರರೆದುರು ದೈನ್ಯ ಪ್ರದರ್ಶನವಾಗಲೀ ಇಲ್ಲ. ನಮ್ಮ ಸಮಸ್ಯೆಯನ್ನು ನೇರವಾಗಿ, ಸರಳವಾಗಿ ತಿಳಿಸುವ ತರಬೇತಿಯನ್ನು ನಾವು ಜನರಿಗೆ ಕೊಡಬೇಕಾಗಿದೆ. ಇಲ್ಲಿ ಸಂಬೋಧನೆಯು ಸ್ಪಷ್ಟವಾಗಿದ್ದು, ಸಮಾನರ ಮಧ್ಯೆ ವ್ಯವಹಾರವಾಗಿದೆ.

ಒಂದು ರೇಡಿಯೊ ಖರೀದಿಸಿದ ಬಳಕೆದಾರರಿಗೆ ಅದು ಸರಿಯಾದ ಕೆಲಸವನ್ನು ಮಾಡಲಿಲ್ಲದ ಕಾರಣ ತೊಂದರೆಯಾಯಿತು. ಆ ಬಗ್ಗೆ ಮಾದರಿ ಪತ್ರವನ್ನು ನೋಡೋಣ.

ಊರು .................

ಇವರಿಂದ

ದಿನಾಂಕ ...............

................ ಬಳಕೆದಾರರ ಹೆಸರು

ವಿಳಾಸ

ಇವರಿಗೆ :

xyz ರೇಡಿಯೋ ಅಂಗಡಿ

ವಿಳಾಸ

ಮಹನೀಯರೆ,







ವಿಷಯ : ತಾವು ಮಾರಾಟ ಮಾಡಿದ ರೇಡಿಯೋವಿನ ಬಗ್ಗೆ.

ದಿನಾಂಕ ..... ರಂದು ತಮ್ಮಿಂದ .... ರೂಪಾಯಿ ಕೊಟ್ಟು ...,. ರೇಡಿಯೊವನ್ನು ಖರೀದಿಸಿದೆ. ಅದು ಸರಿಯಾಗಿ ಕಾರ್ಯವಹಿಸದ ಕಾರಣ ನಿಮ್ಮಲ್ಲಿ ಅದನ್ನು ..... , ......, ......, ದಿನಾಂಕಗಳಂದು ರಿಪೇರಿಗೆ ಕೊಡಲಾಯಿತು.

ಇಷ್ಟು ಬಾರಿ ದುರಸ್ತಿಯಾದರೂ ಅದು ಸರಿಯಾಗಿ ಕಾರ್ಯವಹಿಸದ ಕಾರಣ, ನೀವು ಅದನ್ನು ಹಿಂದೆ ಪಡೆದು ನನ್ನ ಹಣವನ್ನು ಹಿಂದಿರುಗಿಸಬೇಕಾಗಿ ವಿನಂತಿ.

ಇತಿ ನಿಮ್ಮ ವಿಶ್ವಾಸಿ

(ಬಳಕೆದಾರರ ಸಹಿ)

ಯಥಾ ಪ್ರತಿ : 1. ರೇಡಿಯೊ ತಯಾರಿಸಿದ ಕಂಪೆನಿಗೆ

2. ಬಳಕೆದಾರರ ಸಂಘಟನೆಗೆ.

ಪ್ರತಿಗಳನ್ನು ಬಳಕೆದಾರರ ಸಂಘಟನೆಗಳಿಗೆ ಕೊಟ್ಟು, ಅದನ್ನು ಸಂಬಂಧ ಪಟ್ಟ ಪೂರೈಕೆದಾರರ ಗಮನಕ್ಕೆ ತರುವುದು. ಹೆಚ್ಚಿನ ಪೂರೈಕೆದಾರರು ಇದನ್ನು ನೋಡಿದಾಗ ಎಚ್ಚೆತ್ತು ಸಂಬಂಧ ಪಟ್ಟ ವಸ್ತು / ಸೇವೆಗಳ ಕುಂದು ಕೊರತೆಯನ್ನು ಸರಿಪಡಿಸುತ್ತಾರೆ. ಈ ಹಂತದಲ್ಲೂ ಅವರು ಇದನ್ನು ಮಾಡದಿದ್ದಲ್ಲಿ ಅವರಿಗೆ ನೆನಪಿನೋಲೆಗಳನ್ನು ಬರೆಯಬೇಕಾಗುತ್ತದೆ. ಮತ್ತದರ ಪ್ರತಿಯನ್ನು ಮೇಲಧಿಕಾರಿಗಳ ಗಮನಕ್ಕೆ ತರಬೇಕಾಗುವುದು. ಉದಾಹರಣೆಗೆ ನೀರಿನ ಸಮಸ್ಯೆಯ ಬಗ್ಗೆ ದೂರನ್ನು ಮುಖ್ಯ ಇಂಜಿನಿಯರು ಪರಿಹರಿಸದಿದ್ದಲ್ಲಿ, ಅದರ ಪ್ರತಿಯನ್ನು ಮೇಲಧಿಕಾರಿಗಳಾದ ಆಯುಕ್ತರ ಗಮನಕ್ಕೆ ತರಬೇಕಾಗುತ್ತದೆ. ಸಾಮಾನ್ಯವಾಗಿ ಪತ್ರಬರೆದು 10 – 15 ದಿನಗಳ ಅವಧಿಯನ್ನು ಕೊಡಬಹುದು.

ಬಳಕೆದಾರರ ದೂರುಗಳಿಗೆ ಪೂರೈಕೆದಾರರಿಂದ ಯಾವುದೇ ಪ್ರತಿಕ್ರಿಯೆ ಬರದಿದ್ದರೆ, ಬಳಕೆದಾರರ ಸಂಘಟನೆಯೇ ಸಮಸ್ಯೆಯ ಬಗ್ಗೆ ಪೂರೈಕೆದಾರರಿಗೆ ಬರೆಯಬಹುದು. ಈ ಪತ್ರವು ಅತಿ ಸಂಕ್ಷಿಪ್ತವಾಗಿದ್ದು ಇದರಲ್ಲಿ ಬಳಕೆದಾರರ ದೂರಿನ ಪ್ರತಿಯನ್ನು ಲಗತ್ತಿಸಿ, ಆ ಬಗ್ಗೆ ಅವರಿಗೆ ಏನು ಹೇಳಲಿದೆಯೆಂದು ಮಾತ್ರ ಕೇಳಬೇಕು.

ಇದನ್ನು ಗಮನಿಸಿದಾಗ ಲಿಖಿತ ದಾಖಲೆಗಳ ಅಗತ್ಯವೇನೆಂಬ ಪ್ರಶ್ನೆ ಉದ್ಭವವಾಗುತ್ತವೆ. ಇವು ಬಳಕೆದಾರರ ಸಮಸ್ಯೆಯ ಬಗ್ಗೆ ಬಳಕೆದಾರರ ಸಂಘಟನೆಗಳಿಗೆ ದಾಖಲೆಗಳು. ಈ ದಾಖಲೆಯಿಂದಾಗಿ ಮುಂದೆ ತೊಂದರೆಗಳಾಗುವುದನ್ನು ತಪ್ಪಿಸಿಕೊಳ್ಳಬಹುದು. ಕೆಲವೊಮ್ಮೆ ಬಳಕೆದಾರರ ಪರವಾಗಿ ಸಂಘಟನೆಯು ಮುಂದುವರಿದಾಗ, ಪೂರೈಕೆದಾರರು ತೊಂದರೆಗೀಡಾದ ಬಳಕೆದಾರರನ್ನು ಬೆದರಿಸಿ, ದೂರನ್ನು ಹಿಂತೆಗೆಯಲು ಒತ್ತಡ ತರುವುದಿದೆ. ಇಂತಹ ಸಂದರ್ಭಗಳಲ್ಲಿ ಬಳಕೆದಾರರು







ಹೆದರಿ ದೂರನ್ನು ಹಿಂದೆ ಪಡೆದರೂ, ಸಂಘಟನೆಯು ತಮ್ಮಲ್ಲಿ ಪ್ರತಿಗಳಿರುವ ಕಾರಣ ಯಾವುದೇ ತೊಂದರೆಗೀಡಾಗದಂತಿರಬಹುದು.

## ಸಮಸ್ಯೆಗಳ ಪರಿಹಾರಗಳಿಗೆ ಇನ್ನೂ ಕೆಲವು ವಿಧಾನಗಳಿವೆ :

1. ಒಂದೇ ಸಮಸ್ಯೆಯಿರುವ ಬಳಕೆದಾರರನ್ನು ಒಟ್ಟುಗೂಡಿಸುವುದು. ಮಂಗಳೂರಿನಲ್ಲಿ ಕೆಲವು ವರ್ಷಗಳ ಹಿಂದೆ ನೀರಿನ ತೀವ್ರವಾದ ಸಮಸ್ಯೆಯುಂಟಾಯಿತು. ಈ ಸಂದರ್ಭದಲ್ಲಿ ನೀರಿನ ಬಳಕೆದಾರರ ಸಭೆ ಕರೆಯಲಾಯಿತು. ತೊಂದರೆಗೀಡಾದ ಬಳಕೆದಾರರಲ್ಲಿ ಕೆಲವು ಸಾವಿರ ಮಂದಿ ಸಭೆಗೆ ಬಂದರು.

2. ಪತ್ರಿಕೆಗಳನ್ನು ಉಪಯೋಗಿಸುವುದು.

   ಪತ್ರಿಕಾ ಪ್ರಕಟಣೆಯ ಮೂಲಕ, ಸಮಸ್ಯೆಯನ್ನು ಸಂಬಂಧಪಟ್ಟವರ ಹಾಗೂ ಸಾರ್ವಜನಿಕರ ಗಮನಕ್ಕೆ . ತರಬಹುದು. ಇದರಿಂದಾಗಿ, ಸಮಸ್ಯೆಯ ಪರಿಹಾರವಾಗುವ ಸಾಧ್ಯತೆಯಿದೆ. ಆದರೆ, ಇಲ್ಲಿ ಸಾಮಾನ್ಯ ವೈಯಕ್ತಿಕ ಸಮಸ್ಯೆಗಳ ಪರಿಹಾರ ಕಷ್ಟ. ಸಮಸ್ಯೆಯು ತುಂಬಾ ಜನರಿಗೆ ಬಾಧಿಸುವಂತಹದ್ದು ಯಾ ವೈಶಿಷ್ಟ್ಯಪೂರ್ಣದಾಗಿದ್ದರೆ ಮಾತ್ರ ಪರಿಹಾರ ಸಾಧ್ಯ.

3. ವಿಶಿಷ್ಟ ವಿಧಾನಗಳ ಉಪಯೋಗ

   ಈ ವೈಶಿಷ್ಟ್ಯಪೂರ್ಣ ವಿಧಾನಗಳ ಉಪಯೋಗವು ಸಂಬಂಧಪಟ್ಟವರ ಬಗ್ಗೆ ಸಾರ್ವಜನಿಕರಲ್ಲಿ ವ್ಯಂಗ್ಯ ಯಾ ಅವಹೇಳನಕಾರಿ ಭಾವನೆಗಳನ್ನುಂಟುಮಾಡುವುದು.

   ಉದಾಹರಣೆಗೆ ಮಂಗಳೂರಿನ ರಸ್ತೆಗಳಲ್ಲಿ ಸಾಕಷ್ಟು ಹೊಂಡಗಳಿದ್ದು ಇವುಗಳನ್ನು ಮುಚ್ಚಲು ಮಹಾನಗರಪಾಲಿಕೆಯವರು ಆಸಕ್ತಿ ವಹಿಸದ ಕಾರಣ ನಮ್ಮ ಟ್ರಸ್ಟ್ ಹೊಸ ಸ್ಪರ್ಧೆಯೊಂದನ್ನು ನಿಯೋಜಿಸಿತು. ರಸ್ತೆಯಲ್ಲಿರುವ ಅತಿ ದೊಡ್ಡ ಗಾತ್ರದ ಹೊಂಡ ಗುರುತಿಸಿದವರಿಗೆ ಬಹುಮಾನದ ಘೋಷಣೆ (ಈ ಬಗ್ಗೆ ವಿವರಗಳು ಬೇರೆಡೆಯಿದೆ)

   ಮಂಗಳೂರಿನ ಕೆಲವು ಸ್ಥಳಗಳಲ್ಲಿ ತೀವ್ರವಾದ ವಿದ್ಯುತ್ ವೈಫಲ್ಯವಿತ್ತು. ತತ್ಕಾರಣ, ನಾವು ಹೊಸತೊಂದು ಸ್ಪರ್ಧೆಯನ್ನು ಮಾಡಿದೆವು. ನಿಗದಿಪಡಿಸಿದ ಅವಧಿಯೊಳಗೆ ಅತಿ ಹೆಚ್ಚು ವಿದ್ಯುಚ್ಛಕ್ತಿ ನಿಲುಗಡೆಯನ್ನು ಗುರುತಿಸಿದ ಬಳಕೆದಾರರಿಗೆ ಬಹುಮಾನವನ್ನು ಈ ಸ್ಪರ್ಧೆಯಲ್ಲಿ ಘೋಷಿಸಿದೆವು (ವಿವರಗಳು ಬೇರೆಡೆಯಿವೆ).





4. ಕಾನೂನುಗಳ ಉಪಯೋಗ

   ಇದನ್ನು ಕೊನೆಯ ಅಸ್ತ್ರವಾಗಿ ಉಪಯೋಗಿಸಬೇಕು. ಕೆಲವು ಸಮಸ್ಯೆಗಳಿಗೆ ನೇರವಾಗಿ ಪರಿಹಾರ ಸಿಗುವಂತಹ ಕಾನೂನುಗಳು ಇರುವುದಿಲ್ಲ. ಇದ್ದರೂ,



ನ್ಯಾಯವಾದ ವ್ಯವಸ್ಥೆಯ ವಿಳಂಬಗಳಿಂದಾಗಿ ಪರಿಹಾರವು ದೂರು ಸಲ್ಲಿಸಿದ ಬಳಕೆದಾರರ ಮೊಮ್ಮಕ್ಕಳು ಬರಬೇಕಾಗುವಷ್ಟು ವಿಳಂಬವಾಗಬಹುದು. ಈ ಬಗ್ಗೆ ವಿವರಗಳನ್ನು ಬೇರೆ ಕಡೆ ಕೊಡಲಾಗಿದೆ.

5. ಮತ ಪ್ರದರ್ಶನ, ಧರಣಿ ಮುಂತಾದುವುಗಳು

ಬಂದ್, ಘೇರಾವ್ ಇತ್ಯಾದಿಗಳಿಂದ ಸಾರ್ವಜನಿಕರಿಗೆ ತೊಂದರೆಗಳುಂಟಾಗುವ ಕಾರಣ ಇವುಗಳನ್ನು ನಡೆಸಬಾರದು. ಆದರೆ, ಸಂಬಂಧಪಟ್ಟ ಪೂರೈಕೆದಾರರ ಅಸಡ್ಡೆಯ ಬಗ್ಗೆ ಸಾರ್ವಜನಿಕರ ಗಮನ ಸೆಳೆಯಲು ಇಂತಹ ಸಂವಿಧಾನಿಕ ವಿಧಾನಗಳ ಉಪಯೋಗ ಮಾಡಬಹುದು. ಬಳಕೆದಾರರಲ್ಲಿ ಜಾಗ್ರತಿ ಉಂಟುಮಾಡಲು ಕರಪತ್ರಗಳನ್ನು ಮುದ್ರಿಸಿ ಹಂಚಬಹುದು.

6. ಹೊಸವಿಧಾನಗಳು

ನಮ್ಮ ಅನುಭವದಂತೆ ನಾವು ಉಪಯೋಗಮಾಡಿದ ವಿಧಾನಗಳನ್ನು ಮೇಲೆ ಕೊಟ್ಟಿದ್ದೇವೆ. ಇದಕ್ಕಿಂತಲೂ ಭಿನ್ನವಾದ ವಿಧಾನಗಳೇನಾದರೂ ತಮಗೆ, ಓದುಗರಿಗೆ ಹೊಳೆದಲ್ಲಿ ಅವುಗಳ ಉಪಯೋಗದಿಂದ ಬಳಕೆದಾರರ ಸಮಸ್ಯೆಗಳ ಪರಿಹಾರವಾದಲ್ಲಿ ನಮ್ಮ ಗಮನಕ್ಕೆ ತನ್ನಿ. ಎಲ್ಲರಿಗೂ ಉಪಯುಕ್ತವಾಗುವಂತೆ ಅವುಗಳನ್ನು ಈ ಪುಸ್ತಕದ ಮುಂದಿನ ಆವೃತ್ತಿಯನ್ನು ಪ್ರಕಟಿಸುವಾಗ ಉಪಯೋಗಿಸೋಣವಂತೆ. ಆದರೆ ಒಂದು ಮಾತು. ಇವು ಕಾನೂನಿನ ಚೌಕಟ್ಟನ್ನು ಮೀರಬಾರದು.









# ಸರಕಾರಿ ಅಧಿಕಾರಿಗಳು ನಮ್ಮ ಒಡೆಯರಲ್ಲ, ಸೇವಕರು

ಒಡೆಯರಲ್ಲ ಸೇವಕರು – ಇದು ಉಡುಪಿಯ ಬಳಕೆದಾರರ ಆಂದೋಲನವನ್ನು ಆರಂಭಿಸಿದ ಡಾ. ಕೆ. ಪಿ. ಎಸ್. ಕಾಮತರ ಪುಸ್ತಕದ ಶೀರ್ಷಿಕೆ. ಈ ಪುಸ್ತಕದಲ್ಲಿ ಅವರು ಹಲವಾರು ನಿದರ್ಶನಗಳನ್ನು ಕೊಟ್ಟಿದ್ದಾರೆ. ಪ್ರಜಾ ಪ್ರಭುತ್ವದಲ್ಲಿ – ಅದರ ಹೆಸರೇ ಸೂಚಿಸುವಂತೆ ಪ್ರಜೆಗಳು ಪ್ರಭುಗಳು. ಆದರೆ, ನಮ್ಮ ದೇಶದಲ್ಲಿನ ಪರಿಸ್ಥಿತಿ ತದ್ವಿರುದ್ಧವಾಗಿದೆ. ಇಲ್ಲಿ ಸರಕಾರಿ ಅಧಿಕಾರಿಗಳೇ ಪ್ರಭುಗಳಂತೆ ವರ್ತಿಸುತ್ತಾರೆ, ತಮ್ಮ ಅಧಿಕಾರವನ್ನು ಚಲಾಯಿಸುತ್ತಾರೆ ಹಾಗೂ ಬಳಕೆದಾರರ ಶೋಷಣೆಗೆ ಕಾರಣವಾಗಿದ್ದಾರೆ.

ಸರಕಾರಿ ಕಚೇರಿಗಳ ಬಳಕೆದಾರರಿಗೆ ಕೆಲವು ಹಕ್ಕುಗಳಿವೆ. ಮೊದಲು ಇವುಗಳನ್ನು ಗಮನಿಸೋಣ.



## 1. ಸೌಜನ್ಯಪೂರ್ಣ ಸೇವೆ ಪಡೆಯುವ ಹಕ್ಕು

ಸರಕಾರಿ ಕಚೇರಿಗಳಲ್ಲಿ ಜನ ಸಾಮಾನ್ಯರನ್ನು ಕಸದಂತೆ ಕಾಣುವುದು ಸಾಮಾನ್ಯ. ತಮಗೆ ಲಂಚ ಕೊಡುವ, ಪ್ರಭಾವಿ ವ್ಯಕ್ತಿಗಳಿಗೆ ಬಗ್ಗಿ ನಡೆಯುವ ಈ ಅಧಿಕಾರಶಾಹಿ ನೌಕರ ವರ್ಗದವರು ಜನ ಸಾಮಾನ್ಯರನ್ನು ನಿಕೃಷ್ಟವಾಗಿ ನಡೆಸಿಕೊಳ್ಳುವುದು ಸಾಮಾನ್ಯ. ಇದಕ್ಕೆ ಅಪವಾದಗಳೂ ಇವೆ. ಬಳಕೆದಾರರನ್ನು ಸೌಜನ್ಯದಿಂದ ನಡೆಸಿಕೊಳ್ಳುವವರಿದ್ದಾರಾದರೂ ಇವರ ಸಂಖ್ಯೆ ಕಡಿಮೆ.

ಸೌಜನ್ಯರಹಿತ ವರ್ತನೆಯು ಪೊಲೀಸ್, ರೆವಿನ್ಯೂ, ಅಬಕಾರಿ, ಮಾರಾಟಕರ ಇಲಾಖೆಗಳಲ್ಲಿ ಹೆಚ್ಚಿನ ಮಟ್ಟದಲ್ಲಿರುತ್ತದೆ.

## 2. ವ್ಯವಹಾರಗಳಿಗಾಗಿ ಕಚೇರಿಯನ್ನು ಪ್ರವೇಶಿಸುವ ಹಕ್ಕು.



ಸರಕಾರಿ ಕಚೇರಿಗಳೆಂದರೆ ಸಾರ್ವಜನಿಕ ಸ್ಥಳಗಳು. ಇಲ್ಲಿ ಏನಾದರೂ ನ್ಯಾಯಯುತವಾದ ಕೆಲಸವಿದ್ದಲ್ಲಿ ಪ್ರವೇಶಿಸಲು ಬಳಕೆದಾರರಿಗೆ ಹಕ್ಕಿದೆ. ತತ್ಕಾರಣ, ಇಂತಹ ಸ್ಥಳದಿಂದ ಹೊರನಡೆ ಎಂದು ಹೇಳಲು ಸಾಧ್ಯವಿಲ್ಲ. ಅಕ್ರಮ ಪ್ರವೇಶದ ತಕ್ಷೀರನ್ನೂ ದಾಖಲಿಸಲು ಸಾಧ್ಯವಿಲ್ಲ. ಆದರೆ, ಇಲ್ಲಿ ಗಮನಿಸಬೇಕಾದ



ವಿಷಯವೇನೆಂದರೆ – ಸರಕಾರಿ ಕಚೇರಿಗೆ ನುಗ್ಗಿ ಸ್ವೇಚ್ಛಾಚಾರದಿಂದ ವರ್ತಿಸುವ ಅಧಿಕಾರವಿಲ್ಲ.

### 3. ಕೊಟ್ಟ ದಾಖಲೆಗಳಿಗೆ ಸ್ವೀಕೃತಿ ಪಡೆಯುವ ಹಕ್ಕು

ಸರಕಾರಿ ಕಚೇರಿಗಳಿಗೆ ಯಾವುದೇ ಪತ್ರ ಯಾ ದಾಖಲೆಗಳನ್ನು ಸಲ್ಲಿಸಿದಾಗ ಅದಕ್ಕೆ ಸ್ವೀಕೃತಿಯನ್ನು ಪಡೆಯುವ ಹಕ್ಕು ಬಳಕೆದಾರರಿಗಿದೆ. ಇದನ್ನು ಮಾನ್ಯಮಾಡಲೇಬೇಕು. ಸ್ವೀಕೃತಿಯನ್ನು ಪಡೆಯದಿದ್ದಲ್ಲಿ ಕೊಟ್ಟ ದಾಖಲೆಯೇ ಇಲ್ಲವಾಗಬಹುದು! ಪೊಲೀಸು ಇಲಾಖೆಯಲ್ಲಂತೂ ಕೊಟ್ಟ ದೂರುಗಳಿಗೆ ಸ್ವೀಕೃತಿಯನ್ನು ಪಡೆದುಕೊಳ್ಳುವುದು ಅತಿ ಅಗತ್ಯ.

### 4. ಉತ್ತರ ಪಡೆಯುವ ಹಕ್ಕು

ಬರೆದ ಪತ್ರಗಳಿಗೆ ಉತ್ತರ ಪಡೆಯುವ ಹಕ್ಕು ಬಳಕೆದಾರರಿಗಿದೆ. ಆದರೆ, ಇದು ವಿಷಯಕ್ಕೆ ಸಂಬಂಧಪಟ್ಟಲ್ಲಿ ಮಾತ್ರ. ಸಂಬಂಧವಿಲ್ಲದ ಪತ್ರವ್ಯವಹಾರಕ್ಕೆ ಉತ್ತರಿಸಬೇಕಾಗಿಲ್ಲ.

### 5. ಕಚೇರಿಯ ಮುಖ್ಯಸ್ಥರನ್ನು ಮುಖತಃ ಭೇಟಿಯಾಗುವ ಹಕ್ಕು.

ನಮ್ಮ ಕಚೇರಿ ವ್ಯವಹಾರ ಸಂಬಂಧವಾಗಿಯೂ ಕಚೇರಿಯ ಉದ್ಯೋಗಿಗಳ ಬಗ್ಗೆ ದೂರು ಸಲ್ಲಿಸಲು ಬಳಕೆದಾರರಿಗೆ ಹಕ್ಕಿದೆ. ಇದಕ್ಕಾಗಿ ಕಚೇರಿಯ ಮುಖ್ಯಸ್ಥರನ್ನು ಭೇಟಿಯಾಗಲು ಸಾಧ್ಯವಿದೆ. ನಾವು ಬೇಕಾಬಿಟ್ಟಿ ಆ ವ್ಯಕ್ತಿಯ ಸಮಯ ಹಾಳುಮಾಡಬಹುದೆಂದು ಇದರ ಅರ್ಥ ಅಲ್ಲ. ಭೇಟಿಗಾಗಿ ನಿಗದಿಪಡಿಸಿದ ಸಮಯದಲ್ಲಿ ಮಾತ್ರ ಭೇಟಿಯಾಗಬಹುದು. ಉಳಿದ ಸಮಯದಲ್ಲಿ ಅನುಮತಿಯ ಮೇರೆಗೆ ಭೇಟಿಯಾಗಬಹುದು.

ಸರಕಾರಿ ಕಚೇರಿಗಳ ಬಳಕೆದಾರರು ಲಂಚ, ವಶೀಲಿ ಇತ್ಯಾದಿಗಳ ಮೊರೆ ಹೋಗುವುದು ಸಾಮಾನ್ಯ. ಇದಲ್ಲದೆ, ನೌಕರರೂ ಇದನ್ನು ಅಪೇಕ್ಷಿಸುವುದು ಸಾಮಾನ್ಯವಾಗಿದೆ. ಈ ಸಮಸ್ಯೆಗೆ ನಮ್ಮ ಹಕ್ಕುಗಳನ್ನು ತಿಳಿದು ಹೋರಾಡುವುದೇ ಸರಿಯಾದ ಮಾರ್ಗ.

ಸರಕಾರಿ ಕಚೇರಿಗಳ ಬಳಕೆದಾರರು ವಿಜಯಪಡೆದ ಕೆಲವು ನಿದರ್ಶನಗಳನ್ನು ಇಲ್ಲಿ ನೀಡುವುದು ಸೂಕ್ತ.

ಕೆಲವು ವರ್ಷಗಳ ಹಿಂದೆ ಜನತಾ ಸರ್ಕಾರವು ನಿರ್ಗತಿಕರಿಗೆ ವೃದ್ಧಾಪ್ಯ ವೇತನದ ಯೋಜನೆಯನ್ನು ಜಾರಿಗೆ ತಂದಿತ್ತು. ಅಂಗವಿಕಲರು, ನಿರ್ಗತಿಕರಾದವರಿಗೆ ರೂ. 50ರ ಮಾಸಿಕ ವೇತನ ಈ ಯೋಜನೆಯಲ್ಲಿ ನಿಗದಿಯಾಗಿತ್ತು. ಇದಕ್ಕೆ ಅರ್ಜಿ ಸಲ್ಲಿಸಿ,







ತಹಶೀಲ್ದಾರರಿಂದ ಅದರ ಪರಿಶೀಲನೆಯಾಗಿ ಅದರ ವಿಲೇವಾರಿಯಾಗಬೇಕಿತ್ತು. ಈ ಅರ್ಜಿಗಳಿಗೆ ಸ್ಥಳಪರಿಶೀಲನೆ, ವ್ಯಕ್ತಿಯ ಬಗ್ಗೆ ವಿವರ ಸಂಗ್ರಹ ಮಾಡಲು ಗ್ರಾಮಲೆಕ್ಕಿಗರಿಗೆ ಸೂಚನೆ ಕೊಡಲಾಗುತ್ತಿತ್ತು. ಮಂಗಳೂರಿನ ಸಮೀಪದ ಪದ್ಯನಾಡಿಯೆಂಬ ಸ್ಥಳದ ದೊಡ್ಡಣ್ಣ ಶೆಟ್ಟಿಯೆಂಬವರು ಈ ವೇತನಕ್ಕೆ ಅರ್ಜಿ ಸಲ್ಲಿಸಿದ್ದರು. ಈ ವರದಿ ನೀಡಬೇಕಾದಲ್ಲಿ ಅರ್ಜಿಯ ಸ್ಥಳ ತನಿಖೆಗೆ ಗ್ರಾಮಲೆಕ್ಕಿಗರು ಶೆಟ್ಟಿಯವರನ್ನು ಕರೆಸಿದರು. ಅವರ ಪದ್ದತಿಯೇನೆಂದರೆ ಕೊಡಬೇಕಾದರೆ ಬಳಕೆದಾರರು ಇವರಿಗೆ ಎರಡು ತಿಂಗಳ ಮೊತ್ತವನ್ನು ಲಂಚವಾಗಿ ಕೊಡಬೇಕಾಗಿತ್ತು. ದೊಡ್ಡಣ್ಣ ಶೆಟ್ಟರು ಸಾಲ ಮಾಡಿ ಹಣ ತರಲು ಪ್ರಯತ್ನಿಸಿ ಸೋತರು. ಕೊನೆಗೆ, ಇವರಿಗೆ ತನ್ನ ಮೊದಲ ಎರಡು ತಿಂಗಳ ವೇತನವನ್ನು ಕೊಡುತ್ತೇನೆಂದರು. ಆದರೆ, ಈ ಅಧಿಕಾರಿ ತುಂಬಾ ನೀತಿ –ನೀಯತ್ತಿನವರು! ಒಪ್ಪಲೇ ಇಲ್ಲ!

ತಾವು ನಿರ್ಗತಿಕರಲ್ಲದ ಕಾರಣ, ಈ ವೇತನ ಕೊಡಲಾಗುವುದಿಲ್ಲವೆಂಬ ಕೆಲವು ಪತ್ರ ವಾರಗಳ ನಂತರ, ಬಳಕೆದಾರರಿಗೆ ಬಂತು! ಈ ಸಂದರ್ಭದಲ್ಲಿ ಆ ಊರಿನ ಯುವಕವೃಂದದ ಕೆಲವರು ನಮ್ಮಲ್ಲಿ ಈ ಬಗ್ಗೆ ತಿಳಿಸಿದರು. ಆಗ ನಾವು ಸಹಾಯಕ ಆಯುಕ್ತರಿಗೆ ಮರುಪರಿಶೀಲನಾ ಅರ್ಜಿ ಸಲ್ಲಿಸಬೇಕೆಂದು ತಿಳಿಸಿದೆವು. ಈ ಅರ್ಜಿಗೆ ಅವರ ಉತ್ತರ ಬಂದದ್ದು ಬಹಳ ಚುಟುಕಾಗಿ – "ತಹಶೀಲ್ದಾರರ ನಿರ್ಧಾರವನ್ನು ಬದಲಾಯಿಸಲು ಸಾಧ್ಯವಿಲ್ಲ"! ಆಗ, ನಾವು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಯವರಿಗೆ ಪತ್ರ ಬರೆದು ಕೇಳಿಕೊಂಡೆವು. ಗ್ರಾಮ ಲೆಕ್ಕಿಗರ ನಿರ್ಧಾರವನ್ನು ಬದಲಾಯಿಸಲು ತಹಶೀಲ್ದಾರರಿಗೆ ಸಾಧ್ಯವಿಲ್ಲ. ತಹಶೀಲ್ದಾರರ ನಿರ್ಧಾರವನ್ನು ಬದಲಾಯಿಸಲು ಸಹಾಯಕ ಆಯುಕ್ತರಿಗೆ ಸಾಧ್ಯವಿಲ್ಲ, ಅವರ ನಿರ್ಧಾರವನ್ನು ಬದಲಾಯಿಸಲು ನಿಮಗಾದರೂ ಸಾಧ್ಯವಿದೆಯೇ ತಿಳಿಸಿ. ಇಲ್ಲವಾದಲ್ಲಿ ನಿಮ್ಮ ಇಲಾಖೆಯನ್ನು ಚಲಾಯಿಸಲು ಗ್ರಾಮ ಲೆಕ್ಕಿಗರು ಸಾಕು. ನಿಮ್ಮಂತಹ ಮೇಲಧಿಕಾರಿಗಳ ಕೆಲಸವೇನು ಎಂದು ನೇರವಾಗಿ ಪ್ರಶ್ನಿಸಿದೆವು. ಇದಲ್ಲದೆ, ಈ ಬಗ್ಗೆ ಪತ್ರಿಕೆಗಳಲ್ಲೂ ಪ್ರಕಟಿಸಿದೆವು. ಈ ಖಾರವಾದ ಪತ್ರ ಅವರನ್ನು ಚುಚ್ಚಿರಬೇಕು. ಒಂದು ವಾರದೊಳಗೆ ಇವರಿಗೆ ವೃದ್ಧಾಪ್ಯ ವೇತನವನ್ನು ಮಂಜೂರು ಮಾಡಲಾಯಿತು.

ಮಂಗಳೂರಿನಲ್ಲಿ ಮಹಾಮಾಯಾ ದೇವಸ್ಥಾನವಿದೆ. ಅದಕ್ಕೆ ಸಂಬಂಧಪಟ್ಟ ಕೆಲವು ಮನೆಗಳಿವೆ. ಈ ಮನೆಗಳಲ್ಲಿ ಹಲವಾರು ಬಾಡಿಗೆದಾರರಿದ್ದು, ಅವರನ್ನು ಹೊರಹಾಕಲು ಮಾಲೀಕರು ಅನೇಕ ವಿಧಾನಗಳನ್ನು ಅನುಸರಿಸುತ್ತಿದ್ದರು. ಪೋಲೀಸರಿಗೆ ಲಂಚ ಕೊಟ್ಟು, ಅಲ್ಲಿನ ಯುವಕರನ್ನು ಆಗಾಗ ಥಳಿಸಲಾಗುತ್ತಿತ್ತು.

ನಾರಾಯಣ ರಾಯರು ಮಂಗಳೂರಿನ ಬಳಿಯ ಸುರತ್ಕಲ್ಲಿನ ನಿವಾಸಿ. ಇವರ ಏಕಮಾತ್ರ ಪುತ್ರ ಕೆರೆಯಲ್ಲಿ ಮುಳುಗಿ ಮೃತಪಟ್ಟಿದ್ದ. ಇಂತಹ ಸಂದರ್ಭಗಳಲ್ಲಿ ಮೃತ ಪಟ್ಟ ವ್ಯಕ್ತಿಯನ್ನು ಅವಲಂಬಿಸಿರುವ ಕುಟುಂಬದವರಿಗೆ ಬೇರೆ ಯಾವುದೇ







ವರಮಾನವಿಲ್ಲದಿದ್ದಲ್ಲಿ, ರೂ. 5,000ದ ವಿಮೆಯಿಳಿಸಿದ ಮೊತ್ತವನ್ನು ಕೊಡಲಾಗುತ್ತದೆ. ಇದಕ್ಕೆ ಸಂಬಂಧ ಪಟ್ಟ ಫಾರ್ಮು, ಅರ್ಜಿಗಳನ್ನು ಭರ್ತಿ ಮಾಡಿದ ನಾರಾಯಣ ರಾಯರು ಇದನ್ನು ಸುರತ್ಕಲ್ಲಿನಲ್ಲಿ ಕೊಡುವಾಗ ಅಲ್ಲಿಯ ಗುಮಾಸ್ತರು ಹೇಳಿದರಂತೆ 'ಸ್ವಾಮಿ, ಇದು ಸರಕಾರಿ ಹಣ, ಸುಲಭದಲ್ಲಿ ಸಿಕ್ಕಲಿಕ್ಕಿಲ್ಲ'.

ಮುಂದಿನ ಘಟನೆಗಳು ಈ ಮಾತಿನ ಅರ್ಥವನ್ನು ನಾರಾಯಣ ರಾಯರಿಗೆ ಮಾಡಿಕೊಟ್ಟವು. ಹಣಕ್ಕಾಗಿ ಕಚೇರಿಯಿಂದ ಕಚೇರಿಗೆ ಅವರು ಅಲೆದಾಡಬೇಕಾಯಿತು. ತಿಂಗಳು ಗಟ್ಟಲೆ ಅಲೆದಾಡಿದ ಇವರು ನಮ್ಮ ಸಹಾಯ ಯಾಚಿಸಿದರು. ನಾವು ಜಿಲ್ಲಾಧಿಕಾರಿಯವರಿಗೆ ಪತ್ರವನ್ನು ಬರೆಸಿಕೊಟ್ಟೆವು. ಇವರು ಅದನ್ನು ಸಲ್ಲಿಸಿ, ಮುಖತಃ ಭೇಟಿಯಾದರು. ಹಣವನ್ನು ಕೂಡಲೇ ಮಂಜೂರು ಮಾಡಿಸಲಾಗುವುದೆಂಬ ಆಶ್ವಾಸನೆ ಕೊಟ್ಟರು. ಆಶ್ವಾಸನೆ ಕೊಟ್ಟು, ಕೆಲವು ವಾರಗಳು ಕಳೆದರೂ ಸುದ್ದಿಯಿಲ್ಲದ ಕಾರಣ, ಅವರು ಮತ್ತೆ ಬಂದರು. ಈ ಬಾರಿ, ನಮ್ಮ ಸಂಘಟನೆಯು ಈ ವಿಷಯವನ್ನು ಎತ್ತಿಕೊಂಡಿತು.

ನಾರಾಯಣ ರಾವ್‌ರವರು 80 ವರ್ಷದವರ ಹಾಗೆ ಕಾಣುತ್ತಾರೇಕೆ ಎಂಬ ಶೀರ್ಷಿಕೆಯಡಿಯಲ್ಲಿ, 50 ವರ್ಷದ ಇವರು 80 ವರ್ಷದವರ ಹಾಗೆ ಕಾಣಲು ಪ್ರಾಯಶಃ ಇವರ ಅಲೆದಾಟ ಕಾರಣವಿರಬೇಕೆಂದು ತಿಳಿಸಿ, ಅವರ ಕರುಣಾಜನಕ ಕಥೆಯನ್ನು ಬಣ್ಣಿಸಿದೆವು. ಅದು ಮೊದಲು ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಪ್ರಕಟವಾಯಿತು. ಪ್ರಕಟವಾದ ದಿನ, ತಹಶೀಲ್ದಾರರು ನಾರಾಯಣರಾಯರ ಮನೆಗೆ ಬಂದರು.

ನಾರಾಯಣ ರಾಯರ ಮನೆ, ಗುಡ್ಡದ ಮೇಲಿದೆ. ತಹಶೀಲ್ದಾರರು ತಮ್ಮ ಸರಕಾರಿ ಮರ್ಜಿಯಲ್ಲಿ ಜವಾನನ್ನು ಕಳುಹಿಸಿ, ನಾರಾಯಣ ರಾವ್‌ರವರನ್ನು ಕರೆತರಲು ಹೇಳಿದರು. ಆದರೆ, ಪ್ರಜಾಪ್ರಭುತ್ವದಲ್ಲಿ ಪ್ರಜೆಗಳು ಒಡೆಯರೆಂದು ಆಗ ನಾರಾಯಣ ರಾಯರಿಗೆ ನೆನಪಾಯಿತು ! ಬರಲು ನಿರಾಕರಿಸಿದರು. ಬೇಕಾದರೆ ತಹಶೀಲ್ದಾರರು ತಮ್ಮ ಮನೆಗೆ ಬರಲಿ ಎಂದರು. ತಹಶೀಲ್ದಾರರು ರಾತ್ರೆ ಬಹಳ ಹೊತ್ತಿನ ವರೆಗೆ ತಮ್ಮ ಜೀಪಿನಲ್ಲಿ ಕೂತರು. ಆದರೂ ನಾರಾಯಣರಾಯರು ಜಗ್ಗಲಿಲ್ಲ. ಕೊನೆಗೆ, ತಹಶೀಲ್ದಾರರೇ ಗುಡ್ಡ ಹತ್ತಿ, ಇವರ ಮನೆಗೆ ಬಂದು ಸಹಿ ಮಾಡಿಸಿಕೊಂಡು ಹೋದರು!

ಈ ಉಪಟಳವನ್ನು ತಾಳಲಾರದ ಅವರು ನಮ್ಮ ಸಹಾಯ ಯಾಚಿಸಿದರು. ಆಗ, ನಾವು ಅವರಿಗೆ ಪೊಲೀಸು ಠಾಣೆಗೆ ವಾರಂಟು ಯಾ ಸಮನ್ಸ್ ಇದ್ದರೆ ಮಾತ್ರ ಹೋಗಬೇಕು ಯಾ ಯಾವುದಾದರೂ ಸಂಜ್ಞೇಯ ಅಪರಾಧ ಮಾಡಿದವರನ್ನು ಮಾತ್ರ ದಸ್ತಗಿರಿ ಮಾಡಿಕೊಂಡು ಹೋಗಬಹುದು ಎಂದು ಅವರ ಹಕ್ಕುಗಳನ್ನು ತಿಳಿಸಿದೆವು.







ಕೆಲವು ದಿನಗಳ ನಂತರ ಮತ್ತೆ ಪೊಲೀಸರು ಬಂದರು. ಅದೂ ಸಮವಸ್ತ್ರ ಧರಿಸದೆ. ಅಲ್ಲಿನ ಮುಂದಾಳುವನ್ನು ಸ್ಟೇಷನಿಗೆ ಬಾ ಎಂದು ಹೇಳಿದರು. ಜಾಗ್ರತನಾದ ಆತ ವಾರಂಟು ಕೇಳಿದ; ಇಲ್ಲವೆಂದರು ಮಾತ್ರವಲ್ಲದೆ ಕಾನೂನು ಮಾತನಾಡುತ್ತೀಯಾ ಎಂದು ಬೆದರಿಸಿದರು. ಆದರೂ ಹೆದರಲಿಲ್ಲ. ಬರುವುದೇ ಇಲ್ಲವೆಂದ. ಆತನಿಗೆ 'ಪಾಠ' ಕಲಿಸುತ್ತೇನೆಂದ ಪೋಲೀಸರು ಠಾಣೆಯಿಂದ ವಾಹನ ತರಿಸಿದರು. ಆಗ, ಅಲ್ಲಿನ ಜನರೆಲ್ಲರೂ ಒಗ್ಗಟ್ಟಾಗಿ ನಿಂತು ಪೊಲೀಸರನ್ನು ಸುತ್ತುವರಿದು "ತಾಕತ್ತಿದ್ದರೆ ನಮ್ಮನೆಲ್ಲರನ್ನು ಕೊಂಡುಹೋಗಿ" ಎಂದು ಸವಾಲೆಸೆದರು. ಬಾಯಿಮುಚ್ಚಿದ ಪೊಲೀಸರು ತೆಪ್ಪಗೆ ಹಿಂದಿರುಗಿದರು. ಇದರ ನಂತರ ಅಲ್ಲಿಯ ಬಳಕೆದಾರರಿಗೆ ಪೊಲೀಸರ ಕಾಟ ನಿಂತಿತು.

ಈ ಕೆಲವು ನಿದರ್ಶನಗಳು ಬಳಕೆದಾರರ ಜಾಗ್ರತಿಯಿಂದ ಯಾವ ರೀತಿಯಲ್ಲಿ ಸರಕಾರಿ ಇಲಾಖೆಗಳಿಗೆ ಚುರುಕು ಮುಟ್ಟಿಸಬಹುದೆಂದು ತೋರಿಸುತ್ತವೆ.









# ಬಿಸಿಯಾದ ಅಡುಗೆ ಅನಿಲ

ಕೆಲವು ವರ್ಷಗಳ ಹಿಂದೆ ಮಂಗಳೂರಿನ ಅಡುಗೆ ಅನಿಲ ವಿತರಕರು ಅನಭಿಷಿಕ್ತ ರಾಜರುಗಳಂತೆ ತಮಗೆ ಮನಬಂದಂತೆ ವರ್ತಿಸುತ್ತಿದ್ದರು. ಹೊಸ ಜೋಡಣೆಗಳನ್ನು ಕೊಡುವುದರಲ್ಲಿ ಅವ್ಯವಹಾರ, ತುಂಬಿದ ಜಾಡಿಗಳನ್ನು ಕೊಡುವುದರಲ್ಲಿ ವಿಳಂಬ; ಪ್ರಶ್ನಿಸಿದ ಬಳಕೆದಾರರ ದಬಾವಣೆ ಇತ್ಯಾದಿ ಅವ್ಯಾಹತವಾಗಿ ನಡೆಯುತ್ತಿದ್ದವು. ಈ ಬಗ್ಗೆ ತೈಲ ಕಂಪೆನಿಗಳ ಅಧಿಕಾರಿಗಳಿಗೆ ದೂರು ಸಲ್ಲಿಸಿದರೂ, ಅವರಿಂದ ಯಾವುದೆ ಸರಿಯಾದ ಕ್ರಮ ಕಂಡುಬರುತ್ತಿಲ್ಲ. ಈ ಬಗ್ಗೆ ಪತ್ರಗಳನ್ನು ಬರೆದು, ಸಂಬಂಧಪಟ್ಟ ಅಧಿಕಾರಿಗಳನ್ನು ಮಾತನಾಡಿಸಿದರೂ ಯಾವುದೇ ಕ್ರಮಗಳು ನಡೆದಿಲ್ಲವಾದರಿಂದ, ಈ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವ ಅಗತ್ಯ ಕಂಡು ಬಂತು.

ಅಡುಗೆ ಅನಿಲ ವಿತರಕರ ಅವ್ಯವಹಾರಗಳಿಂದ ತೊಂದರೆಗೀಡಾದ ಸಾವಿರಾರು ಬಳಕೆದಾರರಿದ್ದ ಕಾರಣ, ಇವರೆಲ್ಲರನ್ನೂ ಒಟ್ಟುಗೂಡಿಸಲು ಒಂದು ಸಭೆಯನ್ನು ಕರೆಯಲಾಯಿತು. ಈ ಸಭೆಗೆ ಎಲ್ಲಾ ತೈಲ ಕಂಪೆನಿಗಳ ಸಂಬಂಧಪಟ್ಟ ಅಧಿಕಾರಿಗಳನ್ನೂ, ವಿತರಕರನ್ನೂ ಆಹ್ವಾನಿಸಲಾಯಿತು. ಸಭಾಂಗಣವು ಕಿಕ್ಕಿರಿದು ತುಂಬಿತ್ತು. ಕಂಪೆನಿಯ ಅಧಿಕಾರಿಯೊಬ್ಬರು ಅಡುಗೆ ಅನಿಲದ ಉಪಯೋಗ, ಅದರ ಉಪಯೋಗದಲ್ಲಿ ತೆಗೆದುಕೊಳ್ಳಬೇಕಾದ ಮುಂಜಾಗ್ರತೆ ಮುಂತಾದುವುಗಳ ಬಗ್ಗೆ ಭಾಷಣ ಆರಂಭಿಸಿದರು. 5 ನಿಮಿಷದ ಮಾತಿನೊಳಗೆ ಸಭಿಕರೊಬ್ಬರು ಎದ್ದು ನಿಂತು, "ನಿಲ್ಲಿಸಿ ನಿಮ್ಮ ಭಾಷಣ. ನಾವು ಇಲ್ಲಿ ಬಂದಿರುವುದು ದೂರುಗಳನ್ನು ಕೊಡಲು, ನೀವು ಕೇಳಿಸಿಕೊಂಡರೆ ಸಾಕು" ಎಂದು ದಬಾಯಿಸಿದರು.

ಇದರೊಂದಿಗೆ, ಬಳಕೆದಾರರು ಒಬ್ಬೊಬ್ಬರಾಗಿಯೇ ವೇದಿಕೆಗೆ ಬಂದು, ತಮ್ಮ ದೂರುಗಳನ್ನು ಹೇಳಲು ಆರಂಭಿಸಿದರು. ಆಗಿನವರೆಗೆ ಇದನ್ನೆಲ್ಲಾ ಸಹಿಸಿಕೊಂಡಿದ್ದ ಬಳಕೆದಾರರು, ಸಿಕ್ಕ ಅವಕಾಶವನ್ನು ಉಪಯೋಗಿಸಿಕೊಂಡರು. ಒಂದೊಂದಾಗಿ ಇವರ ಅವ್ಯವಹಾರಗಳು ಬೆಳಕಿಗೆ ಬಂದುವು. ಓರ್ವ ಮಾರಾಟಗಾರರು ಬಳಕೆದಾರರು ಸ್ಟವ್ ಖರೀದಿಸಲು ಕಡ್ಡಾಯಮಾಡುತ್ತಿದ್ದರು. ಸ್ಟವ್ ಖರೀದಿಸದವರು, ಈ ವಿತರಕರಿಗೆ ಸ್ಟವ್ ಬಾಬ್ತೆಂದು, ಅದರ ಮಾರಾಟದಿಂದ ಅವರಿಗೆ ಬರಬಹುದಾದ ಲಾಭವನ್ನು ಕೊಡಬೇಕಾಗಿತ್ತು! ವಿತರಕರು ಇದನ್ನು ಎಷ್ಟು ರಾಜಾರೋಷವಾಗಿ ನಡೆಸುತ್ತಿದ್ದರೆಂದರೆ, ಈ ಬಾಬ್ತಿನ ಮೊತ್ತವನ್ನು ಬಿಲ್ಲಿನ ಹಿಂದೆ ನಮೂದಿಸುತ್ತಿದ್ದರು! ಇನ್ನೂ ಕೆಲವರು ತಮಗೆ ಮನಬಂದವರಿಗೆ ಮೊದಲು ಹೊಸ ಕನೆಕ್ಷನುಗಳನ್ನು ಕೊಡುತ್ತಿದ್ದರು. ತುಂಬಿದ ಜಾಡಿಗಳ ವಿತರಣೆಯಲ್ಲಂತೂ ವಿತರಕರು, ಮನೆಗೆ ಕೊಡುವ ಸಿಬ್ಬಂದಿಗಳು







ಸ್ವೇಚ್ಛಾಚಾರದಿಂದ ವರ್ತಿಸುತ್ತಿದ್ದರು. ಕೆಲವರಿಂದ ಲಂಚ ಪಡೆದು ಮೊದಲು ಅವರಿಗೆ ಕೊಡುತ್ತಿದ್ದರು! ಇನ್ನೂ ಕೆಲವರಿಂದ ಬೇರೆ ಬೇರೆ ರೀತಿಯ ಸಬೂಬುಗಳನ್ನು ಕೊಟ್ಟು, ಹೆಚ್ಚಿನ ಹಣವನ್ನು ವಸೂಲಿ ಮಾಡುತ್ತಿದ್ದರು. ಈ ಅವ್ಯವಹಾರಗಳನ್ನು ಸಹಿಸಿಕೊಂಡಿದ್ದ ಬಳಕೆದಾರರ ಆಕ್ರೋಶ ಎಷ್ಟರಮಟ್ಟಿಗಿತ್ತೆಂದರೆ, ಓರ್ವ ಮಹಿಳೆ, ವೇದಿಕೆಗೆ ಬಂದು ಓರ್ವ ವಿತರಕನನ್ನು ಅವಾಚ್ಯ ಶಬ್ದಗಳಿಂದ ಬೈದು "ಇವನೇ, ಈ ಬೋಳಿ ಮಗನೆ ಅನಿಲ ಕನೆಕ್ಷನ್ ಕೊಡುವುದಿಲ್ಲವೆಂದ" ಎಂದು ತಿಳಿಸಿದರು. ಆಕೆಗೆ ಹೊಸ ಕನೆಕ್ಷನ್ ಮಂಜೂರಾಗಿತ್ತು. ಅದರ ಮಂಜೂರಾತಿ ಪತ್ರವನ್ನು ತೆಗೆದುಕೊಂಡು ಹೋದಾಗ ಆತ, ನಿನಗೆ ಕೊಡುವುದಿಲ್ಲವೆಂದಿದ್ದನಂತೆ! ಅದರ ಮುಯ್ಯಿಯನ್ನು ಆಕೆ ಬಳಕೆದಾರರ ಸಭೆಯಲ್ಲಿ ತೀರಿಸಿದ್ದರು.

ನಡೆದ ಸಭೆಯು ರಾತ್ರಿ 9.30ರ ವರೆಗೆ ಕೆಲವು ಗಂಟೆಗಳ ಕಾಲ ನಡೆಯಿತು. ಕೊನೆಗೆ ಕೆಲವು ಅಂಶಗಳಿರುವ ನೀತಿ ಸಂಹಿತೆಯನ್ನು ರಚಿಸಲಾಯಿತು. ಇವುಗಳು ಹೀಗಿದ್ದುವು :

1. ಹೊಸ ಕನೆಕ್ಷನ್‌ಗಳನ್ನು ಸರತಿ ಪ್ರಕಾರವೇ ಕೊಡುವುದು.
2. ಸ್ಟವ್‌ಗಳ ಖರೀದಿ ಕಡ್ಡಾಯವಲ್ಲ, ಖರೀದಿಸದವರು ಯಾವುದೇ ಮೊತ್ತವನ್ನು ಸ್ಟವ್ ಬಾಬ್ತಾಗಿ ಕೊಡಬೇಕಾಗಿಲ್ಲ.
3. ತುಂಬಿದ ಜಾಡಿಗಳನ್ನು ಕೊಡಲು ವೇಟಿಂಗ್ ಲಿಸ್ಟ್ ವ್ಯವಸ್ಥೆ ಜಾರಿಗೆ ಬರುವುದು. ಇದನ್ನು ಬಳಕೆದಾರರು ಯಾವತ್ತೂ ಪರಿಶೀಲಿಸಲು ಅವಕಾಶವಿದೆ.
4. ತುಂಬಿದ ಜಾಡಿಗಳನ್ನು ಬಳಕೆದಾರರ ಅಡುಗೆ ಮನೆಗೆ ಮುಟ್ಟಿಸುವ ಜವಾಬ್ದಾರಿ ವಿತರಕರದ್ದು. ಅದಕ್ಕೆ ಯಾವುದೇ ಹೆಚ್ಚುವರಿ ಶುಲ್ಕ ಕೊಡಬೇಕಾಗಿಲ್ಲ.
5. ಬಳಕೆದಾರರೊಡನೆ ತಾಳ್ಮೆ, ಸೌಜನ್ಯದಿಂದ ವರ್ತಿಸಲಾಗುವುದು.

ಇದಲ್ಲದೆ, ಪರಿಸ್ಥಿತಿಯ ಪುನರ್ ಪರಿಶೀಲನೆಗೆ ಎರಡು ತಿಂಗಳ ನಂತರ ಕರೆಯಲಾಗುವ ಸಭೆಗೆ ಎಲ್ಲರೂ ಹಾಜರಾಗುತ್ತೇವೆಂಬ ಭರವಸೆಯನ್ನೂ ಅವರು ಕೊಟ್ಟರು.

ಎರಡು ತಿಂಗಳುಗಳು ಕಳೆದುವು. ಕೆಲವು ವಿತರಕರು ಸುಧಾರಿಸಿಕೊಂಡಿದ್ದರು. ಉಳಿದವರು ಹಿಂದಿನಂತೆ ವರ್ತಿಸುತ್ತಿದ್ದರು. ಪರಿಸ್ಥಿತಿಯ ವಿಮರ್ಶೆಗೆ ಸಭೆ ಕರೆಯಲಾಯಿತು. ವಿತರಕರಾಗಲಿ, ಕಂಪೆನಿಯ ಅಧಿಕಾರಿಗಳಾಗಲಿ ಸಭೆಗೆ ಹಾಜರಾಗಲಿಲ್ಲ! ಸಭೆಯಲ್ಲಿ ಬಳಕೆದಾರರು ಗಣನೀಯ ಸಂಖ್ಯೆಯಲ್ಲಿದ್ದರು. ಈ ಸಂದರ್ಭದಲ್ಲಿ ನಾವು ಬಳಕೆದಾರರ ದೂರುಗಳನ್ನು ಸಂಗ್ರಹಿಸಿದೆವು. ಬಳಿಕ, ಈ ದೂರುಗಳ ಬಗ್ಗೆ ದೀರ್ಘವಾದ ಪತ್ರ ಬರೆದು, ಇವರ ಅವ್ಯವಹಾರಗಳ ಪಟ್ಟಿ ಮಾಡಿ







ಅವುಗಳ ಪ್ರತಿಗಳನ್ನು ಪ್ರತಿ ತೈಲ ಕಂಪೆನಿಯ ಪ್ರಮುಖರಿಗೂ, ಪೆಟ್ರೋಲಿಯಂ ಸಚಿವರಿಗೂ ಕಳುಹಿಸಿದೆವು. ಪತ್ರಗಳನ್ನು ಪತ್ರಿಕೆಗಳಿಗೂ ಕೊಟ್ಟೆವು. ಪೆಟ್ರೋಲಿಯಂ ಸಚಿವರಿಂದ ಈ ಬಗ್ಗೆ ಕೂಲಂಕುಷ ತನಿಖೆ ನಡೆಸುವ ಆಜ್ಞೆ ಹೊರಟಿತು. ಪ್ರತಿಯೊಂದು ಕಂಪೆನಿಯ ಮುಖ್ಯ ಜಾಗ್ರತಾದಳದ ಅಧಿಕಾರಿ ಮಂಗಳೂರಿಗೆ ಬಂದರು. ಇವರೆದುರು ಎಲ್ಲಾ ಪುರಾವೆಗಳನ್ನು ಮಂಡಿಸಲಾಯಿತು. ಸಂಬಂಧಪಟ್ಟ ವಿತರಕರಿಗೆ ಇದನ್ನು ಕಂಡು ದಿಗಿಲಾಯಿತು. ಇದು ಎಷ್ಟರಮಟ್ಟಿಗೆ ನಡೆಯಿತೆಂದರೆ, ಸ್ಟವ್ ಬಾಬ್ತು ತೆಗೆದುಕೊಂಡವರು ತಾವು ತೆಗೆದುಕೊಂಡ ಹಣವನ್ನು ಬಳಕೆದಾರರ ಮನೆಗೆ ಮುಟ್ಟಿಸಿ, ಅವರ ಕ್ಷಮಾಪಣೆ ಯಾಚಿಸಿದರು! ಇವರ ಅಕ್ರಮ ಅವ್ಯವಹಾರಗಳು ನಿಂತುಹೋದವು!

ಕೆಲವು ತೈಲ ಕಂಪೆನಿಗಳು ಕ್ಯಾಶ್ ಎಂಡ್ ಕ್ಯಾರಿ ಎಂಬ ಯೋಜನೆಯನ್ನು ಆರಂಭಿಸಿದುವು. (ಈ ಬಗ್ಗೆ ಉಲ್ಲೇಖ ಬಳಕೆದಾರರ ಸುರಕ್ಷಿತತೆಯ ಹಕ್ಕಿನಡಿಯಲ್ಲಿದೆ). ಇದರ ವೈಶಿಷ್ಟ್ಯವೇನೆಂದರೆ ಬಳಕೆದಾರರು ಖಾಲಿ ಜಾಡಿಗಳನ್ನು ವಿತರಕರ ಅಂಗಡಿಗೆ ತಂದು, ತುಂಬಿದ ಜಾಡಿಗಳನ್ನು ತಾವೇ ಕೊಂಡು ಹೋಗಬೇಕಾಗಿತ್ತು. ಬಳಿಕ, ಸ್ಟವ್‌ಗಳಿಗೆ ಇವುಗಳನ್ನು ಬಳಕೆದಾರರೇ ಜೋಡಿಸಬೇಕಾಗಿತ್ತು. ಇದನ್ನು ಮಾಡಬಾರದೆಂದು ಬಳಕೆದಾರರಿಗೆ ಜಾಹೀರಾತುಗಳ ಮೂಲಕ ತಿಳಿಸುತ್ತಿದ್ದ ತೈಲ ಕಂಪೆನಿಗಳು ತಿಪ್ಪರಲಾಗ ಹಾಕಿ, ಈಗ ಇದನ್ನು ತಾವೇ ಮಾಡಬೇಕೆಂದು ಉತ್ತೇಜಿಸುತ್ತಿದ್ದರು! ಅಪಘಾತಗಳಾದರೆ ಅದಕ್ಕೆ ತೈಲ ಕಂಪೆನಿಗಳಿಗೆ ಯಾವುದೇ ಹೊಣೆಯಿಲ್ಲವೆಂಬ ಧೃಡೀಕರಣಪತ್ರವನ್ನೂ ಈ ಯೋಜನೆಗೆ ಸೇರುವ ಬಳಕೆದಾರರಿಂದ ಪಡೆಯಲಾಗುತ್ತಿತ್ತು! ಈ ಬಗ್ಗೆ ನಮ್ಮ ಟ್ರಸ್ಟ್ ತೀವ್ರವಾದ ಪ್ರತಿಭಟನೆಯನ್ನು ಮಾಡಿತು! ಎಲ್ಲಾ ತೈಲಕಂಪೆನಿಗಳ ಪ್ರಮುಖರಿಗೂ, ಪೆಟ್ರೋಲಿಯಂ ಸಚಿವರಿಗೂ, ದೇಶದ ಎಲ್ಲಾ ಭಾಗಗಳಲ್ಲಿರುವ ಬಳಕೆದಾರರ ಸಂಘಟನೆಗಳಿಗೂ ಈ ಯೋಜನೆಯಿಂದಾಗಬಹುದಾದ ಅನಾಹುತಗಳ ಬಗ್ಗೆ ತಿಳಿಸಲಾಯಿತು. ಬಳಿಕ, ತೈಲ ಸಚಿವಾಲಯದಿಂದ ಈ ಯೋಜನೆಯನ್ನು ಕೈಬಿಡಬೇಕೆಂಬ ಆದೇಶವು ಬಂತು!

ಊರಿನಲ್ಲಿ ಎಲ್ಲೂ ಅಡುಗೆ ಅನಿಲ ಲಭ್ಯವಿಲ್ಲದಿದ್ದರೂ, ಒಬ್ಬ ವ್ಯಕ್ತಿ ಹೆಚ್ಚಿನ ಹಣ ಕೊಡುವವರಿಗೆ ಅವುಗಳನ್ನು ಪೂರೈಸುತ್ತಿದ್ದ. ಈತನಲ್ಲಿ ಯಾವಾಗಲೂ ಎಲ್ಲಾ ಕಂಪೆನಿಗಳ ಜಾಡಿಗಳ ದಾಸ್ತಾನು ಇರುತ್ತಿತ್ತು. ಈತನ ಅವ್ಯವಹಾರಗಳಿಗೆ ತೈಲ ಕಂಪೆನಿಗಳ ಕುಮ್ಮಕ್ಕೂ ಇದೆಯೆಂಬ ಅನುಮಾನ ನಮಗಿತ್ತು. ಸ್ಥಳೀಯವಾಗಿ ದೂರಿ ಯಾವುದೇ ಪ್ರಯೋಜನ ಕಂಡುಬಾರದ ಕಾರಣ, ಈತನ ಬಗ್ಗೆ ಅತ್ಯುನ್ನತ ಪೊಲೀಸು ಅಧಿಕಾರಿಯವರಾದ ಶ್ರೀ. ಸಾಂಗ್ಲಿಯಾನಾ ಎಂಬವರಲ್ಲಿ ದೂರು ಸಲ್ಲಿಸಿದೆವು. ಅವರು ಕೂಡಲೇ ಆತನಲ್ಲಿ ಧಾಳಿ ಮಾಡಿಸಿ ಹಲವಾರು ಅಡುಗೆ ಅನಿಲದ ತುಂಬಿದ ಜಾಡಿಗಳನ್ನು ವಶಪಡಿಸಿಕೊಂಡರು. ಆತನ ಮೇಲೆ ಕೆಲವು ತಕ್ಷೀರುಗಳನ್ನು ದಾಖಲಿಸಲಾಯಿತು. ಆದರೂ, ಆತನ ಮೇಲಿರುವ ಮೊಕದ್ದಮೆ ನ್ಯಾಯಾಲಯದಲ್ಲಿ ಖುಲಾಸೆಯಾಯಿತು.







ಆತನ ಅವ್ಯವಹಾರಗಳು ಮುಂದುವರಿದುವು. ನಂತರ, ಈತ ಬಂದು ಜಾಡಿಯಿಂದ ಮತ್ತೊಂದಕ್ಕೆ ಅನಿಲವನ್ನು ತುಂಬುತ್ತಿದ್ದಾಗ ಅದು ಸ್ಫೋಟಿಸಿ ಆತ ಗೊಯಗೊಂಡು, ಓರ್ವ ವ್ಯಕ್ತಿ ಮೃತನಾದ. ಈಗ ಇದು ನಿಂತಿದೆ.

ಈಗ ಮಂಗಳೂರಿನಲ್ಲಿ ಅಡುಗೆ ಅನಿಲದ ಸರಬರಾಜು, ಹೊಸ ಜೋಡಣೆಗಳನ್ನು ಕೊಡುವುದರಲ್ಲಿ ನಡೆಯುವ ಅವ್ಯವಹಾರಗಳು ಕಡಿಮೆಯಾಗಿವೆ. ಈ ಬಗ್ಗೆ ದೂರು ಸಲ್ಲಿಸಿದ ಬಳಕೆದಾರರಿಗೆ ಕೂಡಲೇ ಪರಿಹಾರ ಸಿಗುತ್ತದೆ.

ಇತ್ತೀಚೆಗೆ ಖಾಸಗಿ ರಂಗದ ಅಡುಗೆ ಅನಿಲದ ವಿತರಕರು ಹುಟ್ಟಿಕೊಂಡಿದ್ದಾರೆ. ಇವರು ಬಳಕೆದಾರರಿಗೆ ಉತ್ತಮ ಸೇವೆ ಕೊಡುತ್ತೇವೆಂದು ಹೇಳಿಕೊಳ್ಳುತ್ತಾರಾದರೂ, ಇವರ ಬಗ್ಗೆ ಜಾಗ್ರತೆಯಿಂದಿರುವುದು ಸೂಕ್ತ. ಇವರು ಹೊಸ ಜೋಡಣೆಗಳನ್ನು ಕೊಡುವಾಗ ಸ್ಟವ್, ರೆಗ್ಯುಲೇಟರ್ ಮತ್ತು ಜಾಡಿಯ ಸೆಟ್ಟನ್ನೇ ಕೊಡುತ್ತಾರೆ. ಈ ಮೂಲಕ ಸ್ಟವ್ ಖರೀದಿ ಅವರಿಂದ ಕಡ್ಡಾಯವಾಗುತ್ತದೆ. ಇವರು ಮೊದಲಿಗೆ ಒಳ್ಳೆಯ ಸೇವೆ ಕೊಡುತ್ತಾರಾದರೂ, ಈ ಕಂಪೆನಿಗಳಲ್ಲಿ ಅನಿಲವನ್ನು ಆಮದುಮಾಡುವ, ತುಂಬಿಸುವ ಸಾಮರ್ಥ್ಯವೇ ಇಲ್ಲದ ಕಾರಣ, ಇಂತಹವರಿಂದ ಅಡುಗೆ ಅನಿಲ ಖರೀದಿಸುವ ಬಳಕೆದಾರರು ಜಾಗ್ರತೆಯಿಂದಿರುವುದು ಸೂಕ್ತ. ಕೆಲವು ವರ್ಷಗಳ ಹಿಂದೆ ಎಲ್.ಪಿ.ಸಿ. ಎಂಬ ಹೆಸರಿನಲ್ಲಿ ಅಡುಗೆ ಅನಿಲ ಮಾರಾಟವನ್ನು ಖಾಸಗಿ ಕಂಪೆನಿಯೊಂದು ಆರಂಭಿಸಿತ್ತು. ಹಲವಾರು ಸಾವಿರ ಮಂದಿ ಬಳಕೆದಾರರು ಇವರಿಂದ ಜಾಡಿ, ರೆಗ್ಯುಲೇಟರ್, ಸ್ಟವ್‌ಗಳನ್ನು ಖರೀದಿಸಿದ್ದರು. ಈಗ ಈ ಕಂಪೆನಿಯು ಹೇಳ ಹೆಸರಿಲ್ಲದಾಗಿದೆ! ಖರೀದಿಸಿದ ಬಳಕೆದಾರರು ಟೋಪಿ ಇರಿಸಿಕೊಂಡಿದ್ದಾರೆ!

ಅಡುಗೆ ಅನಿಲ ಈಗ ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲೂ ಲಭ್ಯವಿರುವ ಕಾರಣ, ಇದರ ಬಳಕೆದಾರರು ತಮ್ಮ ಹಕ್ಕುಗಳನ್ನು ನೆನಪಿಟ್ಟುಕೊಳ್ಳುವುದು ಉತ್ತಮ. ಇವುಗಳನ್ನು ಇದೇ ಅಧ್ಯಾಯದಲ್ಲಿ ನಮಗೂ – ಅಡುಗೆ ಅನಿಲ ವಿತರಕ – ತೈಲ ಕಂಪೆನಿಗಳ ಅಧಿಕಾರಿಗಳ ಸಭೆಯಲ್ಲಿ ನಡೆದ ಒಪ್ಪಂದದ ರೂಪದಲ್ಲಿ ಕೊಡಲಾಗಿದೆ. ಇವೇ ಅಡುಗೆ ಅನಿಲ ಬಳಕೆದಾರರ ಹಕ್ಕುಗಳು.









# ಜಾಗೃತರಾದ ಬಳಕೆದಾರರು, ಎಚ್ಚೆತ್ತ ಮಹಾನಗರಪಾಲಿಕೆ

ಮಂಗಳೂರು ಮಹಾನಗರ ಪಾಲಿಕೆಯ ಬಳಕೆದಾರರಾದ ಮಂಗಳೂರಿನ ನಿವಾಸಿಗಳು ಎಲ್ಲಾದರೊಮ್ಮೆ ಎಚ್ಚರಗೊಳ್ಳುವುದಿದೆ. ಹೊಂಡವಿರುವ ರಸ್ತೆಗಳು, ರಸ್ತೆಯಲ್ಲೇ ಕಟ್ಟಡಗಳು, ದುರ್ಗಂಧಪೂರಿತ ಕಾರಂಜಿಗಳನ್ನು ಚಿಮ್ಮಿಸುವ ಒಳಚರಂಡಿ ವ್ಯವಸ್ಥೆಗೆ ಹೆಸರಾದ ಮಂಗಳೂರು ಮಹಾನಗರ ಪಾಲಿಕೆಗೆ ಕೆಲವು ವರ್ಷಗಳ ಕರ್ನಾಟಕ ರಾಜ್ಯದ ಅತ್ಯುತ್ತಮ ಮಹಾನಗರ ಪಾಲಿಕೆ ಎಂಬ ಪ್ರಶಸ್ತಿ ಸಿಕ್ಕಿತ್ತು! ಹಾಗಾದರೆ, ನಮ್ಮ ರಾಜ್ಯದ ಉಳಿದ ಕಡೆಗಳಲ್ಲಿ ಪರಿಸ್ಥಿತಿ ಹೇಗಿರಬೇಕು?

## ಬ್ಯಾಂಕ್ ಕಾಲನಿ ಪ್ರಕರಣ

ಈ ಪ್ರಕರಣವು ಮಹಾನಗರ ಪಾಲಿಕೆಯ ದಿವ್ಯ ನಿರ್ಲಕ್ಷ್ಯವನ್ನು ಎತ್ತಿತೋರಿಸುವ ಹಗರಣಗಳಲ್ಲಿ ಒಂದು. ಟೆಂಪಲ್ ಟ್ಯಾರಿಕ್ ಕಾಲನಿಯೆಂಬುದು ಮಂಗಳೂರಿನ ತಗ್ಗು ಪ್ರದೇಶಗಳಲ್ಲೊಂದು. ಇದರ ಮೇಲ್ಭಾಗದಲ್ಲಿರುವ ರಸ್ತೆಯೊಂದರಲ್ಲಿ ಮಹಾನಗರಪಾಲಿಕೆಯವರು ಸಾರಾ ಸಗಟಾಗಿ ಹೊಟೇಲುಗಳಿಗೆ ಅನುಮತಿ ಕೊಡುತ್ತಾ ಬಂದ ಕಾರಣ, ಒಳಚರಂಡಿ ವ್ಯವಸ್ಥೆಯ ಮೇಲೆ ಅಸಾಧ್ಯ ಒತ್ತಡಬಂತು. ಇದಲ್ಲದೆ, ಈ ಜಾಲದೊಳಗೆ ಹೋಟೆಲಿನ ಸಿಬ್ಬಂದಿ ಬಿಸಾಡುವ ತ್ಯಾಜ್ಯ ವಸ್ತು ಇತ್ಯಾದಿಗಳಿಂದ ಪೈಪುಗಳು ತುಂಬಿ, ಮ್ಯೆನ್ ಹೋಲ್‌ಗಳಿಂದ ನೀರಿನ ಕಾರಂಜಿ ಚಿಮ್ಮುವ ಪರಿಸ್ಥಿತಿಯುಂಟಾಗಿತ್ತು. ಮಾಲಿನ್ಯದಿಂದ ಅಲ್ಲಿರುವ ಬಾವಿಯ ನೀರು ಕಲುಷಿತವಾಗಿ, ದೇವರ ಮೂರ್ತಿಯನ್ನು ವರ್ಷಕ್ಕೊಮ್ಮೆ ಮುಳುಗಿಸುವ ಕೆರೆಯೂ ತುಂಬಿತು. ಈ ಕೆರೆಯ ಮೇಲ್ದಂಡೆಯಲ್ಲಿ ಸಂಸ್ಕೃತ ಪಾಠಶಾಲೆಯಿದ್ದು, ಅಲ್ಲಿನ ವಿದ್ಯಾರ್ಥಿಗಳು ಕಲುಷಿತ ನೀರಿನ ಸೇವನೆಯಿಂದಾಗಿ ಕಾಮಾಲೆ, ವಿಷಮ ಶೀತ ಜ್ವರ ಮುಂತಾದ ಕಾಯಿಲೆಗಳಿಗೂ ಒಳಗಾಗುತ್ತಿದ್ದರು. ಅಲ್ಲಿನ ಜನ ಇದನ್ನೆಲ್ಲಾ ಸಹಿಸಿ ಸುಮ್ಮನಿದ್ದರು.

ಹಲವಾರು ವರ್ಷಗಳು ಕಳೆದರೂ, ಈ ಸಮಸ್ಯೆಗೆ ಪರಿಹಾರ ಸಿಗದ ಕಾರಣ, ಅಲ್ಲಿನವರೆಲ್ಲಾ ಒಟ್ಟಾಗಿ ಬಂದು ಸಮಿತಿಯನ್ನು ರಚಿಸಿದರು. ಸಮಸ್ಯೆಯ ಪರಿಹಾರಕ್ಕಾಗಿ ನಮ್ಮ ಮಾರ್ಗದರ್ಶನದಲ್ಲಿ ಈ ಸಮಿತಿಯು ವ್ಯವಸ್ಥಿತವಾದ ಹೋರಾಟವನ್ನು ನಡೆಸಿತು. ಮಹಾನಗರ ಪಾಲಿಕೆಯ ಮೇಲೆ ಕರ್ನಾಟಕ ಜಲ ಮಾಲಿನ್ಯ ಮಂಡಳಿಗೆ ದೂರು ಸಲ್ಲಿಸಲಾಯಿತು. ಅವರು ಕೆರೆಯ ನೀರನ್ನು ಕಲುಷಿತ ಮಾಡಿದಕ್ಕಾಗಿ ಮಹಾನಗರ ಪಾಲಿಕೆಗೆ ದಂಡ ವಿಧಿಸಿದರು. ಆದರೂ, ಪರಿಸ್ಥಿತಿ ಸುಧಾರಿಸಲಿಲ್ಲ.







ಏತನ್ಮಧ್ಯೆ, ಈ ವಠಾರದಲ್ಲಿ ಅದರ ಮಾಲಿಕರ ಅನುಮತಿಯಿಲ್ಲದೆ ಹತ್ತಿರದ ಹೋಟೆಲಿನವರೊಬ್ಬರು ಹೊಸ ಪೈಪುಗಳನ್ನು ಇರಿಸುವ ವ್ಯವಸ್ಥೆ ಮಾಡಿಸಿದರು! ಈ ಹೋಟೆಲು ಮಾಲಿಕರಿಗೆ, ತಮ್ಮ ಹೋಟೆಲನ್ನು ಇನ್ನೂ ಬೆಳೆಸುವ ಆಸೆ! ಅಲ್ಲಿನ ಬಳಕೆದಾರರು ಪ್ರತಿಭಟನೆಗೆ ಸಜ್ಜಾದರು. ಸ್ಥಳದ ಮಾಲೀಕರಾದ ದೇವಸ್ಥಾನದ ಆಡಳಿತ ಮಂಡಳಿಯವರೂ ಇದಕ್ಕೆ ಬೆಂಬಲ ಸೂಚಿಸಿದರು. ಕೊನೆಗೊಮ್ಮೆ, ಎಲ್ಲರೂ ಸೇರಿ ಒಂದು ನಿರ್ಧಾರಕ್ಕೆ ಬಂದರು. ಕಾನೂನು ಬಾಹಿರವಾಗಿ ತಮ್ಮ ಸ್ಥಳದಲ್ಲಿ ಜೋಡಿಸಿದ ಪೈಪುಗಳನ್ನು ತೆಗೆಸಲು ತಾವು ಯಾಕೆ ನ್ಯಾಯಾಲಯಕ್ಕೆ ಹೋಗಬೇಕೆಂಬ ಪ್ರಶ್ನೆ ಅವರಲ್ಲಿ ಬಂತು. ಜನರೆಲ್ಲರೂ ಒಗ್ಗಟ್ಟಾಗಿ ರಾತ್ರೆ ಬೆಳಗಾಗುವುದರೊಳಗೆ ಆ ಇಡೀ ಪೈಪ್ ಲೈನ್‌ನ್ನೇ ಕಡಿದು ಬಿಸಾಕಿ, ತೋಡಿದ ಕುಳಿಯಲ್ಲಿ ಮಣ್ಣು ತುಂಬಿಸಿದರು. ಮರುದಿನ ಬೆಳಿಗ್ಗೆ ಅಲ್ಲಿ ಅದರ ಕುರುಹೇ ಇಲ್ಲವಾಗಿತ್ತು!

ಹೀಗಾದರೂ ಪರಿಸ್ಥಿತಿ ಸುಧಾರಿಸಲಿಲ್ಲ. ಆಗ, ಆ ವಠಾರದ ಎಲ್ಲರೂ ಒಟ್ಟುಗೂಡಿದರು. ಪುರುಷ, ಮಹಿಳೆ, ಮಕ್ಕಳು ಭೇದವಿಲ್ಲದೆ ಒಂದಾಗಿ ಮೆರವಣಿಗೆ ಹೊರಟು ಮಹಾನಗರ ಪಾಲಿಕೆಯ ಕಚೇರಿಯೆದುರು ಧರಣಿ ಕೂತರು. ಈ ಧರಣಿಯ ಚಿತ್ರ ಎಲ್ಲಾ ಪತ್ರಿಕೆಗಳಲ್ಲೂ ಪ್ರಕಟವಾಯಿತು. ಕೊನೆಗೂ ಎಚ್ಚೆತ್ತ ಮಹಾನಗರ ಪಾಲಿಕೆ ಅಲ್ಲಿ ಹೆಚ್ಚಿನ ವ್ಯಾಸದ ಪೈಪುಗಳನ್ನು ಜೋಡಿಸಿ, ಆ ವಠಾರದ ನಿವಾಸಿಗಳಿಗೆ ತೊಂದರೆಯಾಗದಂತೆ ನೋಡಿಕೊಂಡಿತು!



ಇಷ್ಟೆಲ್ಲಾ ಹೋರಾಟಗಳು ನಡೆದರೂ ಅಲ್ಲಿಯವರ ಸಮಸ್ಯೆಗೆ ಪೂರ್ತಿಯಾದ ಪರಿಹಾರ ಸಿಕ್ಕಿಲ್ಲ. ಈಗಲೂ ಕೆಲವೊಮ್ಮೆ ಒಳಚರಂಡಿ ವ್ಯವಸ್ಥೆಯ ತ್ಯಾಜ್ಯ ನೀರು ಉಕ್ಕಿ ಹರಿಯುತ್ತಿದೆ. ಆದರೆ, ಇಂತಹ ಸಂಧರ್ಭಗಳಲ್ಲಿ ಮಹಾನಗರ ಪಾಲಿಕೆಯ ಸಿಬ್ಬಂದಿಗಳು ಕೂಡಲೇ ಬಂದು ತಡೆಯನ್ನು ನಿವಾರಿಸುತ್ತಾರೆ!

## ಹೊಂಡಗಳನ್ನು ಗುರುತಿಸಿ ಸ್ಪರ್ಧೆ

ರಸ್ತೆಗಳನ್ನು ತಾರು ಮಾಡುವಾಗ ನಡೆಯುವ ಅವ್ಯವಹಾರ, ರಿಪೇರಿಯ ಬಗ್ಗೆ ನಿರ್ಲಕ್ಷ್ಯ ಹಾಗೂ ಧಾರಾಕಾರವಾಗಿ ಸುರಿಯುವ ಮಳೆಯಿಂದಾಗಿ ಮಂಗಳೂರಿನ ರಸ್ತೆಗಳು ನರಕ ಸದೃಶವಾಗುವುದು ಸಾಮಾನ್ಯ ಕೆಲವೊಮ್ಮೆಯಂತೂ, ಏಪ್ರಿಲ್ – ಮೇ ತಿಂಗಳಲ್ಲಿ ಡಾಂಬರು ಮಾಡಲಾದ ರಸ್ತೆ ಜೂನ್ – ಜುಲೈ ತಿಂಗಳಿನೊಳಗೆ ಗದ್ದೆಯಂತಾಗುತ್ತಿತ್ತು! ಮಳೆಯ ಕೃಪಾ ಕಟಾಕ್ಷದಿಂದ ಬಹಳಷ್ಟು ಅವ್ಯವಹಾರಗಳು ಮುಚ್ಚಿಹೋಗುತ್ತಿದ್ದುವು.



ಈ ರಸ್ತೆಗಳ ದುಸ್ಥಿತಿಯ ಬಗ್ಗೆ ಪತ್ರಗಳನ್ನು ಬರೆದು. ದೂರುಗಳನ್ನು ನಿಲ್ಲಿಸಿ ರೋಸಿಹೋದ ಬಳಕೆದಾರರ ರೋಷವನ್ನು ಬಹಿರಂಗಪಡಿಸಲು ನಾವು ಹೊಸತೊಂದು ವಿಧಾನವನ್ನು ಕಂಡು ಹುಡುಕಿದೆವು. ಮಂಗಳೂರು ಮಹಾನಗರ ಪಾಲಿಕೆಯ



ಮಿತಿಯೊಳಗಿರುವ ರಸ್ತೆಗಳಲ್ಲಿರುವ ಅತಿ ದೊಡ್ಡ ಹೊಂಡವನ್ನು ಗುರುತಿಸಿದ ವ್ಯಕ್ತಿಗೆ ಬಹುಮಾನ ಕೊಡುತ್ತೇವೆಂದು ಘೋಷಿಸಿದೆವು. ಆದರೆ, ಮಹಾನಗರ ಪಾಲಿಕೆಯ ಸದಸ್ಯರು, ಸಿಬ್ಬಂದಿಯಿಂದ ಬಂದ ಪ್ರವೇಶ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲವೆಂದೂ ತಿಳಿಸಿದೆವು!









# ಬಳಕೆದಾರರ ಶಿಕ್ಷಣ ಟ್ರಸ್ಟ್


**ಮೈಕ್ರೊವೇವ್ ಸ್ಟೇಷನ್ ರಸ್ತೆ, ಮಂಗಳೂರು – 575006**

**ದೂರವಾಣಿ : 31973**


## ಹೊಂಡವನ್ನು ಗುರುತಿಸಿ ಬಹುಮಾನ ಪಡೆಯಿರಿ – 3

ಮೂರನೆಯ ಬಾರಿಗೆ ಈ ಸ್ಪರ್ಧೆಯನ್ನು ನಡೆಸುವ ದುಸ್ಥಿತಿ ನಮ್ಮ ರಸ್ತೆಗಳಿಗೆ ಬಂದೊದಗಿರುವುದಕ್ಕಾಗಿ ನಮ್ಮ ಟ್ರಸ್ಟ್ ವಿಷಾದಿಸುತ್ತದೆ.

**ಸ್ಪರ್ಧೆಯ ನಿಯಮಗಳು :**

1. ಮಂಗಳೂರು ಮಹಾನಗರಪಾಲಿಕೆಯ ಮಿತಿಯೊಳಗಿರುವ ದಾಮಾರು ಮಾಡಲಾದ, ಸರಕಾರಕ್ಕೆ ಸೇರಿದ ರಸ್ತೆಗಳಲ್ಲಿ ಅತಿ ದೊಡ್ಡ ಗಾತ್ರದ ಹೊಂಡವನ್ನು ಗುರುತಿಸುವುದು ಈ ಸ್ಪರ್ಧೆಯ ಉದ್ದೇಶ.

2. ಒಬ್ಬರು ಎಷ್ಟೂ ಪ್ರವೇಶ ಪತ್ರಗಳನ್ನು ಕಳುಹಿಸಬಹುದು.

3. ಪ್ರವೇಶ ಪತ್ರಗಳಲ್ಲಿ ಬಳಕೆದಾರರ ಹೆಸರು ಮತ್ತು ವಿಳಾಸ, ಹೊಂಡದ ಅಳತೆ ಮತ್ತು ಅದು ಇರುವ ಸ್ಥಳವನ್ನು ಸರಿಯಾಗಿ, ಸ್ಪಷ್ಟವಾಗಿ ನಮೂದಿಸಿರಬೇಕು.

4. ಪ್ರವೇಶ ಪತ್ರಗಳನ್ನು ಆಗಸ್ಟ್ 15, 1988ರೊಳಗೆ ನಮ್ಮ ಟ್ರಸ್ಟಿನ ವಿಳಾಸಕ್ಕೆ ಕಳುಹಿಸತಕ್ಕದ್ದು. ತಡವಾಗಿ ಬಂದ ಪ್ರವೇಶ ಪತ್ರಗಳಿಗೆ ನಮ್ಮ ಟ್ರಸ್ಟ್ ಹೊಣೆಗಾರರಲ್ಲ.

5. ಸಾರ್ವಜನಿಕ ಕಾಮಗಾರಿ ಇಲಾಖೆಯ ನೌಕರರು, ಮಹಾನಗರ ಪಾಲಿಕೆಯ ನೌಕರರು, ರಸ್ತೆ ಕಂಟ್ರಾಕ್ಟರುದಾರರು ಮತ್ತವರ ಸಿಬ್ಬಂದಿಗಳಿಂದ, ನಮ್ಮ ಟ್ರಸ್ಟಿನ ಸದಸ್ಯರು, ಹಾಗೂ ಮೇಲ್ಕಾಣಿಸಲಾದವರ ನಿಕಟ ಸಂಬಂಧಿಗಳಿಂದ ಬಂದ ಪ್ರವೇಶ ಪತ್ರಗಳು ಬಹುಮಾನಕ್ಕೆ ಪರಿಗಣಿತವಾಗುವುದಿಲ್ಲ.

6. ಆಗಸ್ಟ್ 15, 1988ರಂದು ಬಹುಮಾನಿತ ಹೊಂಡಗಳ ಅಳತೆಯನ್ನು ಮಾಡಿ, ಬಳಿಕ ಸ್ಪರ್ಧೆಯ ವಿವರಗಳನ್ನು ಎಲ್ಲಾ ಪತ್ರಿಕೆಗಳಲ್ಲಿ ಪ್ರಕಟಿಸಲಾಗುವುದು.

**ಬಹುಮಾನಗಳು :**

1. **ಮೊದಲನೆಯ ಬಹುಮಾನ : ರೂ. 100/-**
2. **ಎರಡನೆಯ ಬಹುಮಾನ : ರೂ. 50/-**
3. **ಮೂರನೆಯ ಬಹುಮಾನ : 5 ಸರ್ಟಿಫಿಕೇಟುಗಳು**







ಬಹುಮಾನಿತರೆಲ್ಲರಿಗೂ "ಬಳಕೆದಾರರ ಚಳವಳ" ಪತ್ರಿಕೆಯ 12 ಸಂಚಿಕೆಗಳನ್ನು ಉಚಿತವಾಗಿ ಕಳುಹಿಸಲಾಗುವುದು.

ವಿ. ಸೂ.: ಮಂಗಳೂರಿನ ರಸ್ತೆಗಳ ಹೊಂಡಗಳೆಲ್ಲಾ ಆಗಸ್ಟ್ 15ರೊಳಗೆ ಮುಚ್ಚಲ್ಪಟ್ಟಲ್ಲಿ, ಈ ಸ್ಪರ್ಧೆಯನ್ನು ರದ್ದುಗೊಳಿಸಿ, ಬಹುಮಾನದ ಹಣವನ್ನು ಮಹಾನಗರ ಪಾಲಿಕೆಯ ರಸ್ತೆ ದುರಸ್ತಿ ಲೆಕ್ಕಕ್ಕೆ ಜಮಾ ಮಾಡಲಾಗುವುದು.

ಕೊನೆಗೂ, ಬಹುದೊಡ್ಡ ಗಾತ್ರದ ಕೊಳವೊಂದನ್ನು ತೋರಿಸಿಕೊಟ್ಟ ವ್ಯಕ್ತಿಗೆ ಬಹುಮಾನ ಕೊಟ್ಟೆವು. ದ್ವಿತೀಯ, ತೃತೀಯ ಹಾಗೂ ಪ್ರೋತ್ಸಾಹಕ ಬಹುಮಾನಗಳನ್ನೂ ನೀಡಲಾಯಿತು. ಬಹುಮಾನಿತ ಹೊಂಡದ ಚಿತ್ರವು ಎಲ್ಲಾ ಪತ್ರಿಕೆಗಳಲ್ಲೂ ಪ್ರಕಟವಾಯಿತು. ಮಹಾನಗರ ಪಾಲಿಕೆಗೆ ಇದು ಚುಚ್ಚಿತು!

ಬಹುಮಾನ ವಿತರಣೆಗಾಗಿ ನಾವೊಂದು ವಿಶೇಷ ಸಭೆಯನ್ನು ಕರೆದೆವು. ಈ ಸಭೆಗೆ ಮಹಾನಗರ ಪಾಲಿಕೆಯ ಅಧಿಕಾರಿಗಳನ್ನೂ, ಮೇಯರ್‌ರವರನ್ನೂ ಆಹ್ವಾನಿಸಲಾಯಿತು. ಹೊಂಡಗುರುತಿಸಿ ಸ್ಪರ್ಧೆಯ ಬಹುಮಾನ ವಿತರಣೆಯನ್ನು ಮೇಯರ್‌ರವರೇ ಮಾಡಿದರು. ಮಾತ್ರವಲ್ಲದೆ, ತಮ್ಮ ಭಾಷಣದಲ್ಲಿ ಈ ಸ್ಪರ್ಧೆಯಿಂದಾಗಿ ನಾವು ನಾಗರಿಕರಲ್ಲಿ ಜಾಗೃತಿ ಹುಟ್ಟಿಸಿ ಅವರು ತಮ್ಮ ದೂರುಗಳನ್ನು ಸಂಬಂಧಪಟ್ಟವರ ಗಮನಕ್ಕೆ ತರಲು ತರಬೇತಿ ಕೊಡುತ್ತೇವೆಂದು ಶ್ಲಾಘಿಸಿದರು!

ಮುಂದೆ, ಎರಡು ವರ್ಷಗಳ ಬಳಿಕ ಇದೇ ಪರಿಸ್ಥಿತಿ ಮತ್ತೆ ಉಂಟಾಯಿತು. ಈ ಬಾರಿಯೂ ನಾವು ಸ್ಪರ್ಧೆ ಘೋಷಿಸಿದೆವು. ಈ ಸ್ಪರ್ಧೆಗೆ ಕಳೆದ ನಿಯಮಗಳಂತೆ ಒಂದು ಹೊಸ ಶರತ್ತನ್ನೂ ಸೇರಿಸಿದೆವು. ಇದೇನೆಂದರೆ ನಿಗದಿಪಡಿಸಿದ ದಿನಾಂಕದೊಳಗೆ ಎಲ್ಲಾ ಹೊಂಡಗಳನ್ನು ಮುಚ್ಚಿದಲ್ಲಿ, ಬಹುಮಾನದ ಹಣವನ್ನು ಮಹಾನಗರಪಾಲಿಕೆಯ ಲೆಕ್ಕಕ್ಕೆ ಜಮಾ ಮಾಡುತ್ತೇವೆಂದೂ ಸೂಚಿಸಿದೆವು! ಈ ಬಾರಿ ಮಹಾನಗರ ಪಾಲಿಕೆಯವರು ಛಲದಿಂದ ಹೊಂಡಗಳನ್ನು ತುಂಬಿಸಲು ಆರಂಭಿಸಿದರು. ಇದಕ್ಕಾಗಿ, ರಸ್ತೆ ಬದಿಯ ಕೆಂಪು ಮಣ್ಣನ್ನು ಉಪಯೋಗಿಸಿದರು. ವಾಹನಗಳು ಚಲಿಸುವಾಗ ಧಾರಾಕಾರವಾಗಿ ಸುರಿಯುವ ಮಳೆಯಿಂದ ಈ ಕೆಂಪು ಮಣ್ಣು, ನೀರಿನೊಂದಿಗೆ ಸೇರಿ ಕೆಂಪು ಬಣ್ಣದ ಕೆಸರು ನಿರ್ಮಾಣವಾಯಿತು. ವೇಗದಿಂದ ಬರುವ ವಾಹನಗಳು ಈ ನೀರಿನಲ್ಲಿ ಮುಳುಗಿದಾಗ ಈ ನೀರು ಹಾರಿ ದಾರಿಹೋಕರಿಗೆ ಕೆಂಪು ನೀರಿನ ಅಭಿಷೇಕವಾಗುತ್ತಿತ್ತು! ಜನರು "ಯಾಕಪ್ಪಾ ಈ ಬಳಕೆದಾರರ ಟ್ರಸ್ಟಿನವರು ಸ್ಪರ್ಧೆ ಮಾಡಿದ್ದಾರೆ" ಎಂದು ನಮ್ಮನ್ನು ಶಪಿಸುತ್ತಿದ್ದರು! ಸ್ಪರ್ಧೆಯ ಕೊನೆಯ ದಿನಾಂಕದಂದು ಧಾರಾಕಾರವಾಗಿ ಮಳೆ ಸುರಿದು, ಸ್ಪರ್ಧೆಯು ಯಶಸ್ವಿಯಾಗಿ ನಡೆಯಿತು. ಸ್ಪರ್ಧೆಯ ವಿವರ, ಹೊಂಡಗಳ ಚಿತ್ರ ಎಲ್ಲಾ ಪತ್ರಿಕೆಗಳಲ್ಲೂ, ರಾಷ್ಟ್ರೀಯ ಮಟ್ಟದ ನಿಯತಕಾಲಿಕಗಳಲ್ಲೂ ಪ್ರಕಟವಾಯಿತು!







ಮುಂದೆ, ಕೆಲವು ವರ್ಷಗಳ ಕಾಲ ಈ ಸ್ಪರ್ಧೆ ನಡೆಸುವ ಅಗತ್ಯ ಕಂಡುಬರಲಿಲ್ಲ. ಆದರೆ ಎರಡು ವರ್ಷಗಳ ಹಿಂದೆ ಸ್ಪರ್ಧೆಯನ್ನು ಮತ್ತೆ ನಡೆಸಬೇಕಾಯಿತು. ಈ ಬಾರಿ ನಾವು ಅತ್ಯಂತ ದುರವಸ್ಥೆಯ `ರಸ್ತೆಯನ್ನು ಗುರುತಿಸುವ ಸ್ಪರ್ಧೆಯನ್ನು ಏರ್ಪಾಡು ಮಾಡಿದೆವು. ಈ ಬಾರಿ ಮೊದಲನೆಯ ಬಹುಮಾನ ಪಡೆದ ರಸ್ತೆ ಸ್ಥಳೀಯ ಶಾಸಕರ ಮನೆಯೆದುರಿತ್ತು! ದ್ವಿತೀಯ ಬಹುಮಾನ ಪಡೆದ ಮಾರ್ಗ ಮಹಾನಗರ ಪಾಲಿಕೆಯ ಕಚೇರಿಯ ಮುಂಭಾಗದಲ್ಲಿತ್ತು! ಇವುಗಳ ಚಿತ್ರಗಳು ಪತ್ರಿಕೆಗಳಲ್ಲಿ ಪ್ರಕಟವಾದಾಗ ಸಂಬಂಧಪಟ್ಟವರಿಗೆ ಸಾಕಷ್ಟು ಮುಜುಗರವಾಯಿತು.

ಈಗ ಮಂಗಳೂರು ಮಹಾನಗರ ಪಾಲಿಕೆಯವರು ಮಳೆಗಾಲದಲ್ಲೂ ರಸ್ತೆ ರಿಪೇರಿ ನಡೆಸುತ್ತಿದ್ದಾರೆ. ಹೊಂಡಗಳಲ್ಲಿ ಕಲ್ಲು, ಮಣ್ಣು ತುಂಬಿಸಿ ಅವುಗಳ ಆಳವನ್ನು ಕಡಿಮೆ ಮಾಡಲು ಪ್ರಯತ್ನಿಸುತ್ತಾರೆ. ಒಟ್ಟಿನಲ್ಲಿ ಈಗ ಈ ಸ್ಪರ್ಧೆಯನ್ನು ನಡೆಸುವುದು ಸ್ವಲ್ಪ ಕಷ್ಟವಾಗಿದೆ.

ಗೇಲಿಯ ಭಯದಿಂದ ಸಂಬಂಧಪಟ್ಟವರಿಗೆ ಚುರುಕು ಮುಟ್ಟಿಸಲು ಸಾಧ್ಯವೆಂಬುದನ್ನು ಇಲ್ಲಿ ಮನಗಾಣಬಹುದು.

## ದುರ್ಲಭವಾದ ಪುರಭವನ

ಮಂಗಳೂರಿನಲ್ಲಿ ಮಹಾನಗರ ಪಾಲಿಕೆಯ ಸ್ವಾಧೀನದಲ್ಲಿ ಪುರಭವನವಿದೆ. ಇದು ನಗರದ ಮಧ್ಯ ಭಾಗದಲ್ಲಿದ್ದು, ಇರುವ ಸಭಾಗೃಹಗಳಲ್ಲಿ ಅತ್ಯಂತ ಪ್ರಶಸ್ತವಾಗಿದೆ. ಇಲ್ಲಿಯ ರಂಗಸ್ಥಳ, ಪರದೆ, ಆಸನ ವ್ಯವಸ್ಥೆ, ಶೌಚಗೃಹದ ಅವ್ಯವಸ್ಥೆಗಳು ಸಾಕಷ್ಟು ಬಳಕೆದಾರರಿಗೆ ತೊಂದರೆ ಉಂಟುಮಾಡುತ್ತಿದ್ದುವು. ಇದಲ್ಲದೆ, ಓರ್ವ ವ್ಯಕ್ತಿ ಮಹಾನಗರಪಾಲಿಕೆಯ ಸಿಬ್ಬಂದಿಯ ಸಹಾಯದಿಂದ ಈ ಸಭಾಭವನವನ್ನು ಕಾರ್ಯಕ್ರಮಗಳಿಗೆ ಸರಿಯಾಗುವಂತಹ ವೇಳೆಯಲ್ಲಿ ಶನಿವಾರ, ಆದಿತ್ಯವಾರಗಳಂದು ಕಾದಿರಿಸುತ್ತಿದ್ದ. ತತ್ಕಾರಣ, ಆದಿನಗಳಂದು ಕಾರ್ಯಕ್ರಮವು ಮಾಡಲಿಚ್ಛಿಸುವ ಪ್ರತಿಯೊಬ್ಬರೂ ಈತನನ್ನು ತೃಪ್ತಿಪಡಿಸಿದ ಬಳಿಕವೇ ಅದು ಅವರಿಗೆ ಸಿಗಬಹುದಾಗಿತ್ತು!

ಇಷ್ಟಲ್ಲದೆ, ಆ ವ್ಯಕ್ತಿಯ ಪ್ರಭಾವ ಎಷ್ಟಿತ್ತೆಂದರೆ, ಇತರರಿಗೆ ಅದನ್ನು ಕಾದಿರಿಸಲಾದರೂ, ಅದನ್ನು ರದ್ದು ಮಾಡಿ ಆ ದಿನದಂದು ತನ್ನ ಕಾರ್ಯಕ್ರಮ ನಡೆಸುತ್ತಿದ್ದ! ಇಂತಹ ಒಂದು ಘಟನೆಯು ನಡೆದು, ಸಾರ್ವಜನಿಕ ಬಳಕೆದಾರರನ್ನು ಸಿಟ್ಟಿಗೆಬ್ಬಿಸಿತು. ಈ ಪುರಭವನವನ್ನು ಸ್ಪೋರ್ಟ್ಸ್ ಕ್ಲಬ್‌ನವರು ತಮ್ಮ ಚಟುವಟಿಕೆಗಳ ಸಹಾಯಾರ್ಥ ನಾಟಕ ನಡೆಸಲು ಕಾದಿರಿಸಿದ್ದರು. ಇವರಿಗೆ ಆದಿನ ಓಣಂ ಹಬ್ಬ ನಡೆಸಲು ಅದೇ ಸಭಾಗ್ರಹ ಬೇಕಾದಾಗ, ತಮಗದನ್ನು ಬಿಟ್ಟುಕೊಡಬೇಕೆಂದು ಈ ಕ್ಲಬ್‌ನವರನ್ನು ಕೇಳಿಕೊಂಡಿದ್ದರು. ಕ್ಲಬ್‌ನವರು ಒಪ್ಪದಿದ್ದಾಗ ತನ್ನ ವಶೀಲಿ ಉಪಯೋಗಿಸಿ, ಅವರಿಗೆ ಕಾದಿರಿಸಿದ್ದನ್ನು ರದ್ದು ಮಾಡಿಸಿ, ಅದನ್ನು ತನ್ನ







ಕಾರ್ಯಕ್ರಮಕ್ಕೆ ಮಂಜೂರು ಮಾಡಿಸಿಕೊಂಡರು. ಇದಕ್ಕೆ ಒಪ್ಪದ ಕ್ಲಬ್‌ನವರು, ನ್ಯಾಯಾಲಯದ ಮೊರೆ ಹೋಗಿ ತಡೆಯಾಜ್ಞೆ ತಂದು, ಆ ದಿನ ತಮ್ಮ ಕಾರ್ಯಕ್ರಮವನ್ನೇ ನಡೆಸಿದರು. ಇದರಿಂದ ಮಹಾನಗರ ಪಾಲಿಕೆಗೂ, ಈ "ಪ್ರಭಾವಿ" ವ್ಯಕ್ತಿಗೂ ತೀವ್ರವಾದ ಮುಖಭಂಗವಾಯಿತು.

ಇವೆಲ್ಲಾ ಕಾರಣಗಳಿಗಾಗಿ ಪುರಭವನ ಬಳಕೆದಾರರ ಸಭೆಯನ್ನು ಅದೇ ಸ್ಥಳದಲ್ಲಿ ಕರೆದೆವು! ಬಾಡಿಗೆ ಕೊಟ್ಟು ಅದನ್ನು ಪಡೆದು, ನಿಗದಿ ಪಡಿಸಿದ ದಿನಾಂಕದಂದು ಮೇಯರ್, ಕಮಿಷನರ್, ಎಕ್ಸಿಕ್ಯುಟಿವ್ ಇಂಜಿನಿಯರ್‌ರನ್ನು ಕರೆಸಿ, ಬಳಕೆದಾರರಿಗೆ ತಮ್ಮ ಸಮಸ್ಯೆಗಳನ್ನು ತಿಳಿಸಲು ಹೇಳಿದೆವು. ಮೇಲ್ಕಾಣಿಸಲಾದ ಎಲ್ಲಾ ರೀತಿಯ ದೂರುಗಳು ಬಂದುವು. ಓರ್ವ ವ್ಯಕ್ತಿ ಪುರಭವನವನ್ನು ಯಾವ ರೀತಿಯಲ್ಲಿ ತನ್ನ ಖಾಸಗಿ ಆಸ್ತಿ ಮಾಡಿಕೊಂಡಿದ್ದಾನೆಂಬುದು ಬಯಲಾಯಿತು. ಇದರ ನಂತರ ಆ ವ್ಯಕ್ತಿಯ ಹೆಸರನ್ನು ಕಪ್ಪು ಪಟ್ಟಿಯಲ್ಲಿ ಸೇರಿಸಿ, ನಿರ್ದಿಷ್ಟ ಕಾರ್ಯಕ್ರಮಗಳಿದ್ದವರಿಗೆ ಮಾತ್ರ ಪುರಭವನವನ್ನು ಕಾದಿರಿಸಲಾಗುವುದೆಂಬ ಆಶ್ವಾಸನೆಯನ್ನು ಕೊಟ್ಟರು. ಆ ಆಶ್ವಾಸನೆಯು ಕಾರ್ಯರೂಪಕ್ಕೂ ಬಂತು. ಇದಲ್ಲದೆ, ಸೌಲಭ್ಯಗಳನ್ನೂ ಸ್ವಲ್ಪ ಮಟ್ಟಿಗೆ ಸುಧಾರಿಸಲಾಯಿತು. ಒಟ್ಟಿನಲ್ಲಿ ಬಳಕೆದಾರರಲ್ಲಿ ಕೆಲವರು ಹೆಚ್ಚು ಸಮಾನರು ಎಂದು ಹೇಳಿಸಿಕೊಳ್ಳುವ ಸ್ಥಿತಿ ಇಲ್ಲವಾಯಿತು.

## ಇಲ್ಲದಾದ ನೀರು

ಮಂಗಳೂರು ನಗರದಲ್ಲಿ ನೀರಿನ ಸಮಸ್ಯೆ ಇರುವುದು ಎಲ್ಲರಿಗೂ ಹಾಸ್ಯಾಸ್ಪದವೆನಿಸಬಹುದು. ವರ್ಷಕ್ಕೆ 400 ಸೆಮಿಗಿಂತಲೂ ಹೆಚ್ಚು ಮಳೆ ಬೀಳುವ ಇಲ್ಲಿ, ನೀರಿನ ಶೇಖರಣಾ ವ್ಯವಸ್ಥೆ ಇಲ್ಲದ ಕಾರಣ, ಏಪ್ರಿಲ್ – ಮೇ ತಿಂಗಳುಗಳಲ್ಲಿ ನೀರಿನ ಕೊರತೆ ಬರುತ್ತಿತ್ತು.

ಒಂದು ವರ್ಷ ನೀರಿನ ಕೊರತೆಬಂದು, ಅಲ್ಲಲ್ಲಿ ಜನತೆಯ ಹಾಹಾಕಾರವೆದ್ದಿತು. ಈ ಸಮಯದಲ್ಲಿ ನಮ್ಮ ಟ್ರಸ್ಟ್ ನೀರಿನ ಬಳಕೆದಾರರ ಸಭೆಯನ್ನು ಏರ್ಪಡಿಸಿತು. ತೊಂದರೆಗೀಡಾದ ಕೆಲವು ಸಾವಿರ ಮಂದಿ ಉಪಸ್ಥಿತರಿದ್ದರು. ಈ ಸಭೆಗೆ ಬಂದ ಮಹಾನಗರಪಾಲಿಕೆಯ ಕಮಿಷನರ್ ಹಾಗೂ ಎಕ್ಸಿಕ್ಯುಟಿವ್ ಇಂಜಿನಿಯರ್‌ರು ಸಮಸ್ಯೆಗಳಿಗೆ ಪರಿಹಾರ ಸೂಚಿಸಿ, ಮುಂದೆ ಇಂತಹ ಸಮಸ್ಯೆ ಮರುಕಳಿಸದಂತೆ ನೋಡುವ ಆಶ್ವಾಸನೆಯಿತ್ತರು.

ಇದರ ನಂತರ ಕೆಲವು ವರ್ಷಗಳ ಹಿಂದೆ ಆರಂಭವಾಗಿದ್ದ ವೆಂಟೆಡ್ ಡ್ಯಾಮ್‌ನ ಕಾರ್ಯ ಕ್ಷಿಪ್ರಗತಿಯಲ್ಲಿ ನಡೆಯಿತು. ಈಗ ಮಂಗಳೂರಿನಲ್ಲಿ ನೀರಿನ ಸಮಸ್ಯೆ ಕಡಿಮೆಯಾಗಿದೆಯಾದರೂ, ಇದು ಯಾವಾಗ ಮರುಕಳಿಸಬಹುದೆಂದು ಹೇಳಲು ಸಾಧ್ಯವಿಲ್ಲ.







## ಹಣ ನುಂಗಿದ ಬಿಲ್ ಕಲೆಕ್ಟರ್

ಮಂಗಳೂರು ಮಹಾನಗರ ಪಾಲಿಕೆಯ ಅದಕ್ಷತೆಯ ಬಗ್ಗೆ ಬಂದ ಈ ದೂರು ವಿಚಿತ್ರವಾದದ್ದು. ಬಳಕೆದಾರರೊಬ್ಬರು ತಮ್ಮ ಮನೆ ತೆರಿಗೆಯನ್ನು ಸರಿಯಾದ ಸಮಯದಲ್ಲಿ ಪಾವತಿಸಿ, ಮಹಾನಗರ ಪಾಲಿಕೆಯ ಅಧಿಕೃತ ರಶೀತಿ ಪಡೆಯುತ್ತಿದ್ದರು. ಪರಿಸ್ಥಿತಿ ಹೀಗಿದ್ದರೂ ಅವರಿಗೆ ಮಹಾನಗರ ಪಾಲಿಕೆಯಿಂದ ತಾವು ಕಳೆದ ಮೂರು ವರ್ಷಗಳಿಂದ ಮನೆ ತೆರಿಗೆ ಪಾವತಿ ಮಾಡಿಲ್ಲವೆಂಬ ನೋಟೀಸು ಬಂತು! ಅವರು ಅದನ್ನು, ಹಣ ಕಟ್ಟಿದ ರಶೀತಿಗಳನ್ನೂ ಪುರಾವೆಯಾಗಿ ತಂದರು. ಈ ವಿಷಯವನ್ನು ಪರಿಶೀಲಿಸಿದಾಗ, ಬಿಲ್ ಕಲೆಕ್ಟರ್ ಹಣವನ್ನು ತಿಂದು ಹಾಕಿದ್ದ! ಮೊತ್ತಗಳನ್ನು ಮಹಾನಗರ ಪಾಲಿಕೆಯ ಖಜಾನೆಗೆ ಕಟ್ಟಿದ್ದೇ ಇಲ್ಲ. ಇದು ಬಳಕೆದಾರರ ತಪ್ಪಲ್ಲದ ಕಾರಣ ಮಹಾನಗರಪಾಲಿಕೆಯವರು ಬಾಯಿಮುಚ್ಚಬೇಕಾಯಿತು. ಸರಿಯಾದ ತನಿಖೆ ನಡೆದಾಗ ಈ ಬಿಲ್ ಕಲೆಕ್ಟರ್ ಕೆಲವು ಲಕ್ಷ ರೂಪಾಯಿಗಳನ್ನು ದೋಚಿದ್ದ. ಇಷ್ಟೆಲ್ಲಾ ನಡೆದಿದ್ದರೂ ಆತನ ಮೇಲೆ ಮಹಾನಗರ ಪಾಲಿಕೆ ಯಾವುದೇ ಕ್ರಮ ಕೈಗೊಂಡಿಲ್ಲ!

ಈ ಅವ್ಯವಹಾರ ನಡೆದ ಬಳಿಕ, ಮಹಾನಗರ ಪಾಲಿಕೆಯವರು ಬಿಲ್‌ನ ಹಣ ಕಟ್ಟಲು ಹೊಸ ವ್ಯವಸ್ಥೆಯನ್ನು ಜಾರಿಗೆ ತಂದರು. ಬಳಕೆದಾರರಿಗೆ ಮನೆ ತೆರಿಗೆಯನ್ನು ಬ್ಯಾಂಕಿಗೆ ಕಟ್ಟಬೇಕೆಂಬ ಆದೇಶ ಹೊರಡಿಸಲಾಯಿತಲ್ಲದೆ. ತೆರಿಗೆಯ ಪಾವತಿ ನೋಟೀಸಿನ ಮೇಲೆ ಅವರು ಅದನ್ನು ಯಾವ ಬ್ಯಾಂಕಿನ ಯಾವ ಶಾಖೆಗೆ ಕಟ್ಟಬೇಕೆಂದೂ ನಮೂದಿಸಲಾಯಿತು. ಇದರ ನಂತರ ಬಳಕೆದಾರರನ್ನು ಈ ರೀತಿಯಲ್ಲಿ ಮೋಸಗೊಳಿಸುವುದು ನಿಂತಿತು.

ವ್ಯವಸ್ಥಿತವಾದ ರೀತಿಯಲ್ಲಿ ಮುಂದುವರಿದರೆ ಸ್ಥಳೀಯ ಆಡಳಿತಗಳನ್ನು ಯಾವ ರೀತಿಯಲ್ಲಿ ಕಾರ್ಯೋನ್ಮುಖರಾಗಿ ಮಾಡಿಸಬಹುದೆಂಬುದನ್ನು ಈ ಪ್ರಕರಣಗಳಿಂದ ಕಾಣಬಹುದು. ಮಹಾನಗರ ಪಾಲಿಕೆಯ ಮೇಲೆ ಬಂದ ಅಸಂಖ್ಯ ದೂರುಗಳಲ್ಲಿ ಈ ಮೂರನ್ನು ಮಾತ್ರ ಉಲ್ಲೇಖಿಸಿದ್ದೇವೆ.







# ರೇಶನ್ ಅಂಗಡಿಯಲ್ಲಿ ವಂಚನೆ

ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೆ ನ್ಯಾಯ ಬೆಲೆಯಲ್ಲಿ ಆಹಾರ ವಸ್ತುಗಳನ್ನು ಒದಗಿಸುವ ಉದ್ದೇಶದಿಂದ ಆರಂಭವಾದ ಪಡಿತರ ವ್ಯವಸ್ಥೆಯಲ್ಲಿನ ಕೆಲವು ಕುಂದುಕೊರತೆಗಳು ನಮ್ಮ ಗಮನಕ್ಕೆ ಬಂದುವು. ತತ್ಕಾರಣ, ಪಡಿತರ ಬಳಕೆದಾರರ ಹಕ್ಕುಗಳು ಎಂಬ ಕರಪತ್ರದ 20 ಸಾವಿರ ಪ್ರತಿಗಳನ್ನು ಮಾಡಿ, ಅವುಗಳನ್ನು ಪಡಿತರ ಅಂಗಡಿಗಳಲ್ಲಿ ಸಾಲಾಗಿ ನಿಂತಿರುವ ಬಳಕೆದಾರರಿಗೆ ಹಂಚುವ ವ್ಯವಸ್ಥೆ ಮಾಡಿದೆವು. ಈ ಹಕ್ಕುಗಳು ಹೀಗಿದ್ದುವು.

1. ಪಡಿತರದಲ್ಲಿ ಹಂಚಿಕೆಯಾಗುವ ಆಹಾರ ವಸ್ತುಗಳು ಕಲಬೆರಕೆಯಿಲ್ಲದೆ ಸರಿಯಾದ ಗುಣಮಟ್ಟದವಾಗಿರಬೇಕು.

2. ಹಂಚಿಕೆಯಾಗುವ ಆಹಾರ ವಸ್ತುಗಳು ಸರಿಯಾಗಿ, ಬಳಕೆದಾರರ ಎದುರೇ ತೂಕ – ಅಳತೆಯಾಗಬೇಕು.

3 ಬಳಕೆದಾರರಿಗೆ ತಮಗೆ ಬೇಕಾಗುವ ಆಹಾರ ವಸ್ತುಗಳನ್ನು ಮಾತ್ರ ಖರೀದಿಸುವ ಹಕ್ಕಿದೆ. ಒಂದನ್ನು ಖರೀದಿಸಬೇಕಾದರೆ ಜೊತೆಯಲ್ಲಿ ಮತ್ತೊಂದನ್ನು ಪಡೆಯಲೇ ಬೇಕೆಂಬ ಕಡ್ಡಾಯ ಮಾಡುವ ಹಾಗಿಲ್ಲ.

4. ಆಯಾ ತಿಂಗಳು ಮಂಜೂರಾದ ಪಡಿತರದ ವಸ್ತುಗಳು ತಿಂಗಳ ಕೊನೆಯೊಳಗೆ ಸಿಗಬೇಕು.

5. ಪಡಿತರ ಹಂಚಿಕೆ ಮಾಡುವವರು ಲಾಭಕ್ಕಾಗಿ ಆ ಕೆಲಸಮಾಡುತ್ತಿದ್ದಾರೆ. ತಾವು ಸಮಾಜ ಸೇವಕರಂತೆ ವರ್ತಿಸಬೇಕಾಗಿಲ್ಲ.

## ಮನುಷ್ಯ ಸೇವನೆಗೆ ತಕ್ಕುದಲ್ಲದ ಅಕ್ಕಿ

ಪಡಿತರ ಅಂಗಡಿಗಳಿಗೆ ಸರಬರಾಜಾದ ಅಕ್ಕಿ ಕೆಲವೊಮ್ಮೆ ತೀರಾ ಕಳಪೆ ಗುಣಮಟ್ಟದ್ದಾಗಿರುತ್ತಿತ್ತು. ತೀವ್ರ ವಾಸನೆಯಿರುವ ಇದು ಮನುಷ್ಯ ಸೇವನೆಗೆ ಅನರ್ಹವಾಗಿತ್ತು.





ಈ ಬಗ್ಗೆ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ದೂರು ಸಲ್ಲಿಸಿದಾಗ, ಯಾವುದೇ ಪ್ರತಿಕ್ರಿಯೆ ಕಂಡುಬಾರದ ಕಾರಣ, ನಾವು ಈ ಅಕ್ಕಿಯನ್ನು ಪೊಟ್ಟಣದಲ್ಲಿ ಕಟ್ಟಿ, ಕೇಂದ್ರ ಸರಕಾರದ ಆಹಾರ ಮಂತ್ರಿಯವರಿಗೆ ಕಳುಹಿಸಿಕೊಟ್ಟೆವು. ಒಂದು ವಾರದೊಳಗೆ ಈ ಪ್ರಕರಣದ ತನಿಖೆಗೆ ಹೈದರಾಬಾದಿನಿಂದ ಆಹಾರ ಪೂರೈಕೆ ನಿಗಮದ ಅಸಿಸ್ಟೆಂಟ್



ಡೈರೆಕ್ಟರ್‌ರು ಬಂದರು. ತನಿಖೆ ಜಿಲ್ಲಾಧಿಕಾರಿಯವರ ಕಚೇರಿಯಲ್ಲಿ ನಡೆಯಿತು. ಸ್ಥಳೀಯ ಅಧಿಕಾರಿಗಳು ಅದು ಕುಟ್ಟಲು ಅಕ್ಕಿಯ ಸ್ವಾಭಾವಿಕ ವಾಸನೆ ಇತ್ಯಾದಿ ಸಬೂಬುಗಳನ್ನು ಕೊಡಲು ಪ್ರಯತ್ನಿಸಿದರು. ಆಗ, "ನಾನು ನಮ್ಮಲ್ಲಿ ಅಂತಹ ಹತ್ತು ಕಿಲೋ ಅಕ್ಕಿಯಿದೆ ಅದನ್ನು ಸಂಬಂಧ ಪಟ್ಟ ಅಧಿಕಾರಿಗೆ ಉಚಿತವಾಗಿ ಕೊಡುವೆ" ಎಂದು ಭರವಸೆ ನೀಡಿದೆ!

ಈ ಕೀಳು ಗುಣಮಟ್ಟದ ಅಕ್ಕಿ ರಾಯಚೂರಿನಿಂದ ಸರಬರಾಜಾಗಿತ್ತು. ಅದನ್ನು ಹಿಂದಕ್ಕೆ ಪಡೆಯಲಾಯಿತು. ನಂತರ, ಈ ರೀತಿಯ ಅಕ್ಕಿ ಪಡಿತರದ ಅಂಗಡಿಗಳಿಗೆ ಬರಲಿಲ್ಲ.

## ತೂಕ – ಅಳತೆಯಲ್ಲಿ ವಂಚನೆ

ಖಾದ್ಯ ತೈಲಗಳನ್ನು ತೂಕದಲ್ಲಿಯೇ ಮಾರಬೇಕು. ಆದರೆ, ಪಡಿತರದ ಅಂಗಡಿಗಳಲ್ಲಿ ಇದನ್ನು ಲೀಟರ್ ಲೆಕ್ಕದಲ್ಲಿ ಮಾರಾಟಮಾಡಲಾಗುತ್ತಿತ್ತು! ಅರ್ಥಾತ್, ಬಳಕೆದಾರರಿಗೆ ಚೀಟಿಗೆ 1 ಕಿಗ್ರಾಂ ತೈಲ ಕೊಡಬೇಕಾದರೂ, 900 ಗ್ರಾಂ ನಷ್ಟು ಮಾತ್ರ ಸಿಗುತ್ತಿತ್ತು! ಈ ವಂಚನೆಯಿಂದ ಬಳಕೆದಾರರಿಗೆ ಶೇ. 10 % ನಷ್ಟ!

ಈ ತೂಕದ ವಂಚನೆಯ ಬಗ್ಗೆ ಪತ್ರಿಕೆಗಳಲ್ಲಿ ಸಾಕಷ್ಟು ಪ್ರಚಾರನಡೆಸಿದೆವು. ಜಾಗ್ರತ ಬಳಕೆದಾರರು ಖಾದ್ಯ ತೈಲವನ್ನು ತೂಕದಲ್ಲಿ ಕೊಡಬೇಕೆಂದು ಪಟ್ಟು ಹಿಡಿದರು. ಕೆಲವು ಅಂಗಡಿಯವರು 1 ಕಿಗ್ರಾಂ ಎಣ್ಣೆ ಹಿಡಿಸುವಂತಹ ವಿಶೇಷ ಪಾತ್ರೆಗಳನ್ನು ಮಾಡಿಸಿಕೊಂಡರು. ಆದರೂ, ಈ ಮೋಸ ಮುಂದುವರಿಯುತ್ತಲೇ ಇತ್ತು.

ನಂತರ, ಸೀಲು ಮಾಡಲಾದ ಪೊಟ್ಟಣಗಳಲ್ಲಿ ಖಾದ್ಯ ತೈಲಗಳ ಸರಬರಾಜು ಆರಂಭವಾಯಿತು. ಈ ವಿಧಾನದಿಂದ ಬಳಕೆದಾರರ ವಂಚನೆಗೆ ಕಡಿವಾಣ ಬಿತ್ತು.

## ಹೆಚ್ಚಿನ ಮೊತ್ತ ವಸೂಲಿ ಮಾಡುವ ಪಡಿತರ ಅಂಗಡಿಗಳು

ಕೆಲವು ಕಡೆಗಳಲ್ಲಿ ಪಡಿತರ ವಿತರಣಾ ಅಂಗಡಿಗಳಲ್ಲಿ ಹೆಚ್ಚುವರಿ ಮೊತ್ತಗಳನ್ನು ಸರ್ವಿಸ್ ಚಾರ್ಜ್ ಎಂದು ವಸೂಲಿ ಮಾಡಲಾಗುತ್ತಿತ್ತು. ಪ್ರಶ್ನಿಸಿದವರಿಗೆ ಇದು ಆಹಾರವಸ್ತುಗಳನ್ನು ಸಾಗಿಸಿದ ಖರ್ಚೆಂದು ತಿಳಿಸಲಾಗುತ್ತಿತ್ತು! ಪ್ರತಿಭಟಿಸಿದವರನ್ನು ದಬಾಯಿಸಿ ಬಾಯಿ ಮುಚ್ಚಿಸಲ ಗುತ್ತಿತ್ತು.

ಒಂದು ಹಳ್ಳಿಯಲ್ಲಿದ್ದ ಪಡಿತರ ಅಂಗಡಿಯಾತ ಎಷ್ಟೊಂದು ಮಟ್ಟಕ್ಕೆ ಮುಟ್ಟಿದ್ದನೆಂದರೆ, ಈ ಸರ್ವಿಸ್ ಚಾರ್ಜ್‌ನ ಮೊತ್ತವನ್ನು ಬಿಲ್ಲಿನ ಮೇಲೆಯೇ ಬರೆಯುತ್ತಿದ್ದ! ಈ ಬಗ್ಗೆ ಓರ್ವ ಬಳಕೆದಾರರು ದೂರು ಸಲ್ಲಿಸಿದರು. ಇದರ ಬಗ್ಗೆ ತನಿಖೆಯಾಗಿ, ಆ ಅಂಗಡಿಯ ಪಡಿತರ ವಿತರಣೆಯನ್ನು ರದ್ದು ಮಾಡಲಾಯಿತು.







ಇಂತಹ ಯಾವುದೇ ಶುಲ್ಕವನ್ನು ವಸೂಲಿಮಾಡಲು ಪಡಿತರ ವಿತರಣಾ ಅಂಗಡಿಗಳಿಗೆ ಅಧಿಕಾರವಿಲ್ಲ. ಆಹಾರ ವಸ್ತುಗಳನ್ನು ಸಾಗಿಸುವ ಖರ್ಚನ್ನು ಸರಕಾರವೇ ವಹಿಸುತ್ತದೆ.

ಈ ದೂರುಗಳಲ್ಲದೆ ಪಡಿತರ ವಿತರಣಾ ವ್ಯವಸ್ಥೆಯ ಇನ್ನೂ ಕೆಲವು ಅವ್ಯವಹಾರಗಳ ಬಗ್ಗೆ ದೂರುಗಳನ್ನು ಗಮನಿಸಿದ್ದೇವೆ. ಕೆಲವು ಅಂಗಡಿಗಳಲ್ಲಿ ಆಹಾರ ವಸ್ತುಗಳನ್ನು ಒಳಗಡೆ ತೂಕ ಮಾಡಲಾಗುತ್ತದೆ. ಚಿಮಿಣಿ ಎಣ್ಣೆಯನ್ನು ಪಾತ್ರೆಗೆ ಹಾಕುವಾಗ ನೊರೆ ಎಬ್ಬಿಸಿ, ಇದರ ಪ್ರಮಾಣವನ್ನು ಕಡಿಮೆ ಮಾಡಲಾಗುತ್ತದೆ. ಕೆಲವು ವಸ್ತುಗಳು ಬಂದೇ ಇಲ್ಲವೆಂದು ಬಳಕೆದಾರರಿಗೆ ಸುಳ್ಳು ಹೇಳಿ ಅವುಗಳನ್ನು ಕಾಳ ಸಂತೆಯಲ್ಲಿ ಮಾರಾಟಮಾಡಲಾಗುತ್ತದೆ.

ತಮಿಳ್ನಾಡಿನಲ್ಲಿ ಪ್ರತಿ ಪಡಿತರ ಅಂಗಡಿಗೂ ಬಳಕೆದಾರರ ಪ್ರತಿನಿಧಿಯಿರುವ ಪರಿಪಾಠವಿದೆ. ಈ ವ್ಯಕ್ತಿ ಅಲ್ಲಿ ಅಕ್ರಮ, ಅವ್ಯವಹಾರಗಳು ನಡೆಯದಂತೆ ಜಾಗ್ರತೆ ವಹಿಸುತ್ತಾರೆ. ಕರ್ನಾಟಕದಲ್ಲೂ ಈ ಪದ್ದತಿ ಜಾರಿಗೆ ಬಂದಲ್ಲಿ ಈ ರೀತಿಯ ಅವ್ಯವಹಾರಗಳನ್ನು ತಡೆಗಟ್ಟಲು ಸಾಧ್ಯವಿದೆ.










# ರಂಗು ರಂಗಿನ ಜಾಹೀರಾತುಗಳಿಗೆ ಮರುಳಾಗದಿರಿ

ಆರ್ಥಿಕ ಉದಾರತೆ, ಬಹುರಾಷ್ಟ್ರೀಯ ಪ್ರವೇಶ ಇತ್ಯಾದಿಗಳು ನಡೆಯುತ್ತಿರುವ ಸಮಯದಲ್ಲಿ ಅವಶ್ಯವಲ್ಲದ ವಸ್ತುಗಳಿಗೆ ಅಗತ್ಯಗಳನ್ನು ಹುಟ್ಟಿಸುವ, ದುಬಾರಿ ಬೆಲೆಗೆ ವಸ್ತುಗಳನ್ನು ಖರೀದಿಸಲು ಬಳಕೆದಾರರನ್ನು ಪ್ರಚೋದಿಸುವ ಪ್ರಯತ್ನಗಳು ನಡೆಯುತ್ತಿರುತ್ತವೆ. ಜಾಹೀರಾತುಗಳಿಗೆ ಮರುಳಾದ ಬಳಕೆದಾರರು ತಮಗೆ ಅಗತ್ಯವಿಲ್ಲದ ವಸ್ತುಗಳನ್ನು ಖರೀದಿಸಿ ಮೋಸಹೋಗುತ್ತಾರೆ. ಇಂತಹ ವಂಚಿಸುವ ಜಾಹೀರಾತುಗಳಿಗೆ ತಡೆಹಾಕಲು ಎಂ.ಆರ್.ಟಿ.ಪಿ. ಕಾಯಿದೆಗೆ ಸೆಕ್ಷನ್ 34 – Aಯನ್ನು 1984ರಲ್ಲಿ ಸೇರಿಸಲಾಗಿದೆ. ಇಂತಹ ಕೆಲವು ಜಾಹೀರಾತುಗಳ ಬಗ್ಗೆ ಇಲ್ಲಿ ಮಾಹಿತಿಯನ್ನು ಕೊಡಲಾಗುವುದು. ಸೇವಿಸುವಂತಹ, ವೈದ್ಯಕೀಯದ ಹೆಸರಿನಲ್ಲಿ ಮಾರಾಟವಾಗುವ ವಸ್ತು ಚಿಕಿತ್ಸಾ ಕ್ರಮಗಳನ್ನು ಬೇರೆ ಕಡೆ ವಿವರಿಸಲಾಗಿದೆ. ಜಾಹೀರಾತುಗಳ ಉಪಯೋಗಗಳಲ್ಲಿ ವಸ್ತುವಿನ ಮಾರಾಟಕ್ಕೆ ಉಪಯೋಗವಾಗುವ ಸ್ಪರ್ಧೆ ಇತ್ಯಾದಿಗಳೂ ಇದರಡಿಯಲ್ಲಿವೆ.

## ಅರ್ಧ ಬೆಲೆಗೆ ಮಾರಾಟ

ಇದು ಕರ್ನಾಟಕ ರಾಜ್ಯದ ಮಾತ್ರವಲ್ಲದೆ ದೇಶದ ಹಲವಾರು ಕಡೆ ನಡೆದಿರುವ ಮೋಸ. ಅತಿಯಾಸೆ ಗತಿಗೇಡು ಎಂಬ ಗಾದೆಯನ್ನು ನೆನಪಿಸುವ ಈ ವ್ಯವಹಾರಗಳ ಬಗ್ಗೆ ತಿಳಿಯುವುದು ಅಗತ್ಯ. ಇಂತಹವುಗಳನ್ನು ನಿಲ್ಲಿಸಲು ಮಾಡಿರುವ ವಿಧಾನಗಳನ್ನು ತಿಳಿಸಿದ್ದೇನೆ.

ಈ ವ್ಯವಹಾರಗಳು ಬಹಳ ಆಕರ್ಷಕ ರೀತಿಯಲ್ಲಿ ಆರಂಭವಾಗುತ್ತವೆ. ಹೊರ ರಾಜ್ಯದಿಂದ ಬಂದ ವ್ಯಕ್ತಿಗಳ ತಂಡ ಒಂದು ಅಂಗಡಿಯನ್ನು ಖರೀದಿಸಿ, ಗೃಹೋಪಯೋಗಿ ವಸ್ತುಗಳನ್ನು ಗುಡ್ಡೆ ಹಾಕುತ್ತಾರೆ. ಅತ್ಯಾಕರ್ಷಕ ಕಡಿತದ ಬೆಲೆಗೆ ಇವುಗಳ ಮಾರಾಟ ನಡೆಯುತ್ತದೆ. ಮಾರಾಟದ ಶರ್ತಗಳು ಮಾತ್ರ ವಿಶೇಷ. ಹಣವನ್ನು ಮೊದಲೇ ಕೊಟ್ಟು, ವಸ್ತುಗಳನ್ನು ಗುರುತಿಸಬೇಕು. ಅವರು ನಿಗದಿಪಡಿಸಿದ ಅವಧಿಯ ಬಳಿಕ ಅವುಗಳನ್ನು ಪಡೆಯಬಹುದು. ಮೊದಲು ಪ್ಲಾಸ್ಟಿಕ್ ಬಾಟ್ಲಿಗಳು, ಸ್ಟೀಲ್ ಪಾತ್ರೆಗಳು ಇತ್ಯಾದಿಗಳನ್ನು ಕೊಡಲಾಗುತ್ತದೆ. ಅವಧಿಯೂ ಬಹಳ ಚಿಕ್ಕದಾಗಿರುತ್ತದೆ. ಇದು ಒಂದು ವಾರ ಯಾ 10 ದಿನಗಳಾಗಿರುತ್ತದೆ. ವಸ್ತುಗಳನ್ನು ಪಡೆದವರು ತಮ್ಮ ಬಂಧು, ಮಿತ್ರರಿಗೆ ಈ ಮಾರಾಟದ ಕುರಿತು ತಿಳಿಸುತ್ತಾರೆ. ಮಾರಾಟಗಾರನ







ಮಳಿಗೆಯೆದುರು ದೊಡ್ಡ ಜಾತ್ರೆಯೇ ನೆರೆಯುತ್ತದೆ. ಜನ ಬಂದಂತೆ ವಸ್ತುಗಳನ್ನು ಕೊಡುವ ಅವಧಿ ಹೆಚ್ಚಾಗುತ್ತದೆ ಹಾಗೂ ವಸ್ತುಗಳ ಮಟ್ಟ ಏರುವುದು. ಮೋಟಾರು ಸೈಕಲ್, ಫ್ಯಾನ್, ಮಿಕ್ಸಿ ಇತ್ಯಾದಿಗಳು ಲಭ್ಯವಿರುತ್ತವೆ.

ಈ ಹಂತದಲ್ಲಿ ಜನಜಂಗುಳಿ ನಿಯಂತ್ರಿಸಲು ಅಸಾಧ್ಯವಾಗುವ ಪರಿಸ್ಥಿತಿ ಉಂಟಾಗುವುದು. ಒಬ್ಬರ ಮೇಲೊಬ್ಬರು ಬಿದ್ದು ಹಣ ಕಟ್ಟಲು ಮುಂದಾಗುತ್ತಾರೆ. ಕೊನೆಗೊಂದು ದಿನ, ಅಂಗಡಿಬಾಗಿಲು ಮುಚ್ಚಿರುತ್ತದೆ! ರೊಚ್ಚಿಗೆದ್ದ ಜನ ಬೀಗ ಮುರಿದು ಕೈಗೆಟಕಿದ ವಸ್ತುಗಳನ್ನು ದೋಚುತ್ತಾರೆ. ಕೊನೆಗೆ ಕಟ್ಟಡದ ಮೇಲೂ ಆಕ್ರಮಣ ನಡೆಯುತ್ತದೆ. ವಸ್ತುಗಳು ಸಿಕ್ಕ ಬಳಕೆದಾರರು ಸಂತೋಷದಿಂದಿದ್ದರೆ ಉಳಿದವರು ಅಳುತ್ತಾರೆ!

ಇಂತಹ ಮಾರಾಟಗಳು ಎಷ್ಟೋ ಕಡೆಯಲ್ಲಿ ನಡೆದಿದೆ. ಜನರ ಭರವಸೆ ಹುಟ್ಟಿಸಲು ಇಂತಹ ಮೋಸಗಾರರು ತಮ್ಮ ಸಂಸ್ಥೆಯ ಹೆಸರಿನೆದುರು (ರಿ), ಕೆ.ಎಸ್.ಟಿ. ನಂಬ್ರ ಇತ್ಯಾದಿಗಳನ್ನು ಹಾಕಿರುತ್ತಾರೆ. ಇವನ್ನೆಲ್ಲಾ ನೋಡಿದ ಬಳಕೆದಾರರು ಇವರ ವ್ಯವಹಾರ ಸಕ್ರಮವಾಗಿರಬೇಕೆಂದು ಭಾವಿಸುತ್ತಾರೆ.

ಇಂತಹ ಮಾರಾಟಗಳನ್ನು ನಿಲ್ಲಿಸಲು ಒಂದು ಕಾಯಿದೆಯ ಉಪಯೋಗವನ್ನು ಮಾಡಬಹುದು. ಇದು ಚೀಟಿಗಳು ಮತ್ತು ಹಣ ಮರುಚಲಾವಣಾ ಯೋಜನೆಗಳು (ನಿಷೇಧ) ಕಾಯಿದೆ, 1978ರನ್ವಯ ಸಂಜ್ಞೇಯ ಅಪರಾಧಗಳಾಗಿವೆ.



ಕೆಲವು ವರ್ಷಗಳ ಹಿಂದೆ ಮಂಗಳೂರಿನ ಯೆಯ್ಯಾಡಿ ಎಂಬ ಬಡಾವಣೆಯಲ್ಲಿ ಓರ್ವ ವ್ಯಕ್ತಿ ಇಂತಹ ಯೋಜನೆಯನ್ನು ಆರಂಭಿಸಿದ. ನಾವು ಇದರ ಬಗ್ಗೆ ಪೊಲೀಸರಲ್ಲಿ ದೂರು ಸಲ್ಲಿಸಿ ಆ ವ್ಯಕ್ತಿಯನ್ನು ದಸ್ತಗಿರಿ ಮಾಡಿಸಿದೆವು. ಬಳಿಕ, ಆತ ಊರು ಬಿಟ್ಟು ಹೋದ. ಕೆಲವು ದಿನಗಳ ಬಳಿಕ ಹತ್ತಿರದ ಬಂಟ್ವಾಳದಲ್ಲಿ ಬಳಕೆದಾರರ ಹಕ್ಕುಗಳ ಬಗ್ಗೆ ಭಾಷಣ ಕೊಡಲು ಹೋಗಿದ್ದೆ. ಅಲ್ಲಿನ ಜನಗಳು ತಮ್ಮಲ್ಲೂ ಇಂತಹ ಯೋಜನೆಯಿದೆಯೆಂದರು. ನಡೆಸುವಾತ ಯಾರೆಂದು ನೋಡುವ ಆಸಕ್ತಿಯಿಂದ ಹೋದಾಗ ಅಲ್ಲಿ ಯೆಯ್ಯಾಡಿಯಿಂದ ಪರಾರಿಯಾದ ವ್ಯಕ್ತಿಯೇ ಇದ್ದ! ಈ ಬಗ್ಗೆ ಬಂಟ್ವಾಳ ಪೊಲೀಸು ಠಾಣೆಗೆ ದೂರು ಸಲ್ಲಿಸಿದಾಗ ಆತ ಕಂಬಿಕಿತ್ತ. ಅಲ್ಲಿಂದ ಓಡಿದಾತ ಕೊನೆಗೆ ಉಳ್ಳಾಲವೆಂಬ ಕಡೆ ಅಂಗಡಿ ಮಾಡಿ, ಬಳಕೆದಾರರ ಲಕ್ಷಾಂತರ ರೂಪಾಯಿಯೊಂದಿಗೆ ಪರಾರಿಯಾದ!

ಕಳೆದ ವರ್ಷ (1993)ದಲ್ಲಿ ಮಂಗಳೂರಿನ ಬಡಾವಣೆಯೊಂದರಲ್ಲಿ ಇಂತಹ ಯೋಜನೆಯು ಆರಂಭವಾಯಿತು. ವಿನಾಯಕ ಚೌತಿಯ ದಿನದಂತು ಆರಂಭವಾದ ಈ ಅಂಗಡಿಗೆ ವಿನಾಯಕ ಟ್ರೇಡರ್ಸ್ ಎಂಬ ಶುಭನಾಮವನ್ನೇ ಕೊಡಲಾಗಿತ್ತು! ಈತ ಯೋಜನೆ ಆರಂಭಿಸಿ ಒಂದು ವಾರ ಕಳೆದಾಗ ನಮಗೆ ಈ ಬಗ್ಗೆ ವರ್ತಮಾನ ಬಂತು.



ಅಲ್ಲಿ ಹೋಗಿ ಹಣ ಕೊಟ್ಟು, ಆತನ ಯೋಜನೆಗೆ ಸೇರಿದ ಬಳಿಕ, ಪೊಲೀಸರಿಗೆ ದೂರು ಸಲ್ಲಿಸಿದೆ. ಅಂಗಡಿಯ ಮಾಲಿಕ ಮತ್ತಾತನ ಗ್ಯಾಂಗನ್ನು ದಸ್ತಗಿರಿಮಾಡಿದರು. ವಿಶೇಷವೇನೆಂದರೆ ಆತನನ್ನು ದಸ್ತಗಿರಿ ಮಾಡಿದ ಮರುದಿನ ಹಲವಾರು ಮಹಿಳೆಯರು ನನ್ನನ್ನು ಭೇಟಿಯಾಗಲು ಬಂದರು. ಆತನ ಬಗ್ಗೆ ದೂರು ಸಲ್ಲಿಸಿದ್ದೇಕೆಂದು ನನ್ನನ್ನು ಪ್ರಶ್ನಿಸಿದರು. ಆತ ನಡೆಸುವ ವ್ಯವಹಾರ ಕಾನೂನು ಬಾಹಿರವೆಂದು ತಿಳಿಸಿದಾಗ, ಕೋಪಗೊಂಡರು. ಆತ ಒಂದು ದಿನ ಪರಾರಿಯಾಗುವವನಲ್ಲವೇ ಎಂದಾಗ ಅವರ ಕೋಪಕ್ಕೆ ಕಾರಣ ಗೊತ್ತಾಯಿತು. ಆತ ಹಣವಂಚಿಸಿ ಪರಾರಿಯಾಗುವುದು ಖಂಡಿತವೆಂದು ಅವರಿಗೆ ತಿಳಿದಿತ್ತು. ಆದರೆ, ತಾವು ಈತನ ಯೋಜನೆ ಆರಂಭವಾದಾಗಲೇ ಸೇರಿರುವ ಕಾರಣ, ತಾವು ಹಣ ಕಟ್ಟಿದ ವಸ್ತುಗಳು ಖಂಡಿತವಾಗಿ ಸಿಗಬಹುದೆಂಬ ಭರವಸೆ ಅವರಿಗಿತ್ತು! ನಾವು ಆತನನ್ನು ಆರಂಭಿಕ ಹಂತದಲ್ಲೇ ದಸ್ತಗಿರಿಮಾಡಿಸಿದ ಕಾರಣ, ಅವರ ಅತಿಯಾಸೆಗೂ ಗತಿಗೇಡಾಗಿತ್ತು!

ಸುಮಾರು ಒಂದು ತಿಂಗಳ ಕಾಲ ಜೈಲಿನಲ್ಲಿದ್ದ ಈತ. ಬಳಿಕ ಜಾಮೀನಿನಲ್ಲಿ ಹೊರಬಂದು, ಮತ್ತೆ ತನ್ನ ವ್ಯವಹಾರ ಆರಂಭಿಸಿದ! ಸತ್ಯಕ್ಕೆ ಜಯವೆಂಬ ಶೀರ್ಷಿಕೆಯುಳ್ಳ ಕರಪತ್ರಗಳನ್ನು ಹೊರಡಿಸಿದ! ನಾವು ಈತನ ಯೋಜನೆಗೆ ಸೇರಬೇಡಿ ಎಂಬ ಎಚ್ಚರಿಕೆಯನ್ನು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರೂ, ಹಲವಾರು ಮಂದಿ ಈತನ ಯೋಜನೆಗೆ ಸೇರಿದರು! ಈತನ ಬಗ್ಗೆ ಮುಂದಿನ ಕ್ರಮಗಳನ್ನು ಕೈಗೊಳ್ಳುವ ಬಗ್ಗೆ ನಾವು ಆಲೋಚಿಸುವುದರೊಳಗೆ, ಈತ ಪರಾರಿ! ರೊಚ್ಚಿಗೆದ್ದ ಜನ. ಆತನ ಅಂಗಡಿಯನ್ನು ಲೂಟಿ ಮಾಡಿದರು.

ಇಂತಹ ಯೋಜನೆಗಳು ನಿಮ್ಮೂರಲ್ಲೂ ನಡೆಯಬಹುದು! ಜಾಗ್ರತೆಯಿಂದಿರಬೇಕಾದದ್ದು ಅವಶ್ಯ. ತಮ್ಮ ಮನೆಗೆ ವಸ್ತುಗಳು ಬೇಕೆಂಬ ಆಸೆಯಿಂದಿರುವ ಮಹಿಳೆಯರು ಇಂತಹ ಜಾಲಗಳಿಗೆ ಸಿಕ್ಕಿಹಾಕಿಕೊಳ್ಳುವುದು ಸಾಮಾನ್ಯ. ಈ ಯೋಜನೆಗಳು ಮೇಲೆ ಉಲ್ಲೇಖಿಸಲಾದ ಕಾಯಿದೆಯಡಿಯಲ್ಲಿ ಅಪರಾಧಗಳಾಗಿರುವ ಕಾರಣ, ಯೋಜನೆಯ ಸಂಯೋಜಕರ ಮೇಲೆ ಕಾನೂನು ಕ್ರಮಗಳನ್ನು ಕೈಗೊಳ್ಳಬಹುದು. ಮುಖ್ಯವಾಗಿ ಬಳಕೆದಾರರು ಇದರ ಜಾಹೀರಾತಿಗೆ ಮರುಳಾಗುತ್ತಾರೆ. ಇಂತಹ ಯೋಜನೆಯೊಂದರ ಜಾಹೀರಾತು ಕರಪತ್ರ ಮಾದರಿ ಇಲ್ಲಿ ಮುದ್ರಿತವಾಗಿದೆ. ಯಾವ ರೀತಿಯಲ್ಲಿ ಇದು ಬಳಕೆದಾರರನ್ನು ಆಕರ್ಷಿಸುವುದೆಂಬುದನ್ನು ನೀವೂ ತಿಳಿಯಬಹುದು.



## ಆರ್ಥಿಕ ಬಡ್ಡಿಯ ಆಸೆಯಿಂದ

ಹೆಚ್ಚಿನ ಬಡ್ಡಿ ಸಿಗುವ ಆಸೆಯಿಂದ ಬಳಕೆದಾರರು ಕೆಲವು ಮೋಸದ ಕಂಪೆನಿಗಳಲ್ಲಿ ಠೇವಣಿಯಿರಿಸಿ, ಟೋಪಿಯಿಡಿಸಿಕೊಳ್ಳುವುದಿದೆ. ಇಂತಹ ಕಂಪೆನಿಗಳು ಆಕರ್ಷಕ





ಕೊಡುಗೆ, ಜಾಹೀರಾತು, ರಂಗು – ರಂಗಿನ ಪ್ರಚಾರದ ಮೂಲಕ ಬಳಕೆದಾರರನ್ನು ತಮ್ಮ ಬಲೆಗೆ ಹಾಕಿಕೊಳ್ಳುತ್ತಾರೆ.

ಆದಿತ್ಯ, ಲಾಬೆಲ್ಲಾ, ಫೆಡರಲ್ ಕನ್ಸೋಲೀಡೇಟೆಡ್ ಫೈನಾನ್ಸ್ ಮುಂತಾದ ಹೆಸರಿನ ಈ ಕಂಪೆನಿಗಳು ಬಳಕೆದಾರರ ಕೋಟ್ಯಂತರ ರೂಪಾಯಿಗಳನ್ನು ಕೊಳ್ಳೆಹೊಡೆದಿದೆ. ಮಾನ್ ಜೋಗ್ ಎಂಬ ಹೆಸರಿನ ಇಂತಹ ಕಂಪೆನಿಯು ಬೆಂಗಳೂರಿನಲ್ಲಿದ್ದು, ಇದರ ಬಗ್ಗೆ ಹಲವಾರು ಬಳಕೆದಾರರ ದೂರುಗಳಿವೆ. ಇವುಗಳಲ್ಲಿ ಕೆಲವು ಬಳಕೆದಾರರ ವ್ಯಾಜ್ಯ ಪರಿಹಾರ ವೇದಿಕೆಗಳಲ್ಲಿ ಇತ್ಯರ್ಥವಾಗಿದ್ದು, ಬಳಕೆದಾರರು ತಮ್ಮ ಪರವಾದ ತೀರ್ಪುಗಳಿದ್ದರೂ ಹಣವನ್ನು ಪಡೆಯಲು ಒದ್ದಾಡಬೇಕಾಗಿದೆ. ಕರ್ನಾಟಕ ಫೈನಾನ್ಸ್ ಎಂಡ್ ಲೀಸಿಂಗ್ ಕಂಪೆನಿಯ ಮೇಲೆ ಧಾರವಾಡ ಜಿಲ್ಲಾ ವೇದಿಕೆಯಿಂದಲೇ 70 ರಷ್ಟು ತೀರ್ಪುಗಳು ಬಳಕೆದಾರರ ಪರವಾಗಿ ಬಂದಿದ್ದು, ಅವುಗಳ ಅನುಷ್ಠಾನಕ್ಕೆ ಕಾರ್ಯಕ್ರಮ ಕೈಗೊಳ್ಳಲಾಗಿದೆಯೆಂದು ತಿಳಿದು ಬಂದಿದೆ.

ಇಂತಹ ಯೋಜನೆಗಳಿಗೆ ಬಳಕೆದಾರರು ಸೇರದಂತೆ ಜಾಗ್ರತೆ ವಹಿಸುವುದು ಅಗತ್ಯ. ಒಮ್ಮೆ ತಮ್ಮ ಹಣವನ್ನು ಇವರ ಕೈಗೆ ಕೊಟ್ಟರೆ ಕಥೆ ಮುಗಿದಂತೆ ಲೆಕ್ಕ! ಕೆಲವು ವರ್ಷಗಳ ಹಿಂದೆ ಇಂತಹ ಕೆಲವು ಕಂಪೆನಿಗಳು ದಿವಾಳಿಯಾದಾಗ ಹಣ ಕಳೆದುಕೊಂಡ ಬಳಕೆದಾರರು ನಮ್ಮಲ್ಲಿ ದೂರುಗಳನ್ನು ತಂದಿದ್ದರು. ಅವುಗಳಲ್ಲಿ ಕೆಲವನ್ನು ಗಮನಿಸಬಹುದು.



ಲಾ–ಬೆಲ್ಲಾ ಎಂಬ ಕಂಪೆನಿಯು ದಿವಾಳಿಯಾದಾಗ ಓರ್ವ ಬಳಕೆದಾರರು ನಮ್ಮಲ್ಲಿ ಬಂದರು. ಕೈಯಲ್ಲಿ ನಗದು ಠೇವಣಿಯ ಹಲವಾರು ರಶೀತಿಗಳಿದ್ದುವು. ನೋಡಿದಾಗ ಇವುಗಳಲ್ಲಿ ರೂ. 10,000ದ್ದು ಲಾಬೆಲ್ಲಾ, ಅಷ್ಟೇ ಮೊತ್ತದ್ದು ಆದಿತ್ಯ, ಫೆಡರಲ್ ಕನ್ಸೋಲಿಡೇಟ್ ಫೈನಾನ್ಸ್, ಮತ್ತೆ ಇನ್ನಾವುದೋ ಇಂತಹದ್ದೇ ಬ್ಲೇಡ್ ಕಂಪೆನಿಯದಾಗಿದ್ದುವು. ಇವರು ಪಾಪ, ಒಂದು ವರ್ಷದ ಹಿಂದಷ್ಟೆ ಬ್ಯಾಂಕೊಂದರಿಂದ ನಿವೃತ್ತಿ ಪಡೆದಿದ್ದರು. ತಮ್ಮ ಭವಿಷ್ಯನಿಧಿಯ ಹಣವನ್ನು ಈ ರೀತಿ ಬೇರೆ – ಬೇರೆ ಕಡೆ ಹೂಡಿದ್ದರು. ಕಾರಣವೇನೆಂದು ಕೇಳಿದಾಗ, ಒಂದು ದಿವಾಳಿಯಾದರೆ ಮತ್ತೊಂದರಲ್ಲಿರುವ ಹಣವಾದರೂ ಸುರಕ್ಷಿತವಾಗಿರಬಹುದೆಂಬ ಭರವಸೆಗಾಗಿ ಹೀಗೆ ಮಾಡಿದ್ದರಂತೆ! ಒಟ್ಟಿನಲ್ಲಿ ಎಲ್ಲವೂ ಒಟ್ಟಿಗೆ ದಿವಾಳಿಯಾಗಿದ್ದುವು!



ಮಂಗಳೂರಿನ ಬಳಿ ಒಂದೂರಿಗೆ ಬಳಕೆದಾರರ ಆಂದೋಲನದ ಬಗ್ಗೆ ಭಾಷಣ ಕೊಡಲು ಹೋಗಿದ್ದೆ. ಕೊನೆಯ ಸಾಲಿನಲ್ಲೊಬ್ಬರು ವಯಸ್ಸಾದ ಮಹಿಳೆಯೊಬ್ಬರು ಕಣ್ಣೀರು ಸುರಿಸುತ್ತಾ ಕೂತಿದ್ದರು. ಕಾರಣವೇನೆಂದು ಕೇಳಿದಾಗ ದೊಡ್ಡ, ಆಕರ್ಷಕ ಬಣ್ಣಗಳಲ್ಲಿದ್ದ ನಗದು ಠೇವಣಿ ರಶೀದಿಯೊಂದನ್ನು ತೋರಿಸಿದರು. ತಮ್ಮ ಮಗಳ ಮದುವೆಗೆಂದು 20,000 ರೂಪಾಯಿಗಳನ್ನು ಬ್ಯಾಂಕಿನಲ್ಲಿ ಠೇವಣಿಯಿರಿಸಿದ್ದರಂತೆ.



ಹೆಚ್ಚಿನ ಬಡ್ಡಿಯ ಆಮಿಷಕ್ಕೆ ಬಲೆ ಬಿದ್ದು, ಹಣವನ್ನು ಒಂದೆಗೆದು, ಹತ್ತಿರದಲ್ಲೇ ಇದ್ದಾ ಲಾ – ಬೆಲ್ಲಾ ಕಂಪೆನಿಯಲ್ಲಿರಿಸಿದ್ದರು. ಹಣದ ಭದ್ರತೆಯ ಬಗ್ಗೆ ಅವರಿಗೆ ಸ್ವಲ್ಪ ಸಂಶಯವಿತ್ತಂತೆ. ಅದನ್ನು ಅವರ ಮನೆಯ ಬಳಿಯವರೊಬ್ಬರು, ತಾನಿದ್ದೇನೆಂಬ ಭರವಸೆಯಿಂದ ನಿವಾರಿಸಿದ್ದರಂತೆ. ಈಗ ಹಣಕ್ಕಾಗಿ ಅವರನ್ನು ಕೇಳಿದಾಗ ಅವರು ಕಂಪೆನಿಯೇ ದಿವಾಳಿಯಾಗಿರುವಾಗ ತಾನೇನು ಮಾಡುವುದೆಂದು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದರಂತೆ! ಒಟ್ಟಿನಲ್ಲಿ ಈ ಮಹಿಳೆಯ ಪರಿಸ್ಥಿತಿ ಅತ್ಯಂತ ಚಿಂತಾಜನಕವಾಗಿತ್ತು.

ಇಂತಹ ಎಷ್ಟೊಂದು ಕರುಣಕತೆಗಳಿರಬಹುದು? ಅಧಿಕ ಬಡ್ಡಿಯ ದುರಾಸೆಗೆ ಬಲಿ ಬೀಳದಿರಿಯೆಂದು ಬಳಕೆದಾರರನ್ನು ಎಚ್ಚರವಹಿಸುವುದು ಅತ್ಯಗತ್ಯ. ಒಮ್ಮೆ ಹಣವನ್ನು ಇಂತಹವರ ಕೈಗೆ ಕೊಡುವ ಮೊದಲೇ ಎಚ್ಚರಿಕೆ ವಹಿಸುವುದು ಸೂಕ್ತ.

## ಹಣ ಮರುಚಲಾವಣಾ ಯೋಜನೆಗಳು

ಮನಿ ಸರ್ಕುಲೇಶನ್ ಸ್ಕೀಂಗಳೆಂದು ಪ್ರಚಾರವಾಗುತ್ತಿರುವ ಇವುಗಳ ಬಲೆಗೆ ಬಿದ್ದು, ಬಳಕೆದಾರರು ಹಣ ಕಳೆದುಕೊಂಡು ಒದ್ದಾಡುವುದು ಸಾಮಾನ್ಯ. ಇಂತಹ ಯೋಜನೆಗಳಲ್ಲಿ ಪ್ರತಿಯೊಬ್ಬನೂ ಕೆಲವು ಮಂದಿ ಸದಸ್ಯರನ್ನು ಮಾಡಿ, ಅವರು ಕೊಟ್ಟ ಹಣವನ್ನು ಪಡೆಯಬೇಕಾಗುತ್ತದೆ. ಇದರ ಶರ್ತವೇನೆಂದರೆ, ಈ ಸದಸ್ಯರುಗಳೂ ಅಷ್ಟೇ ಮಂದಿಯನ್ನು ಯೋಜನೆಗೆ ಸೇರಿಸಿಕೊಳ್ಳಬೇಕು! ಇಂತಹ ಒಂದು ಯೋಜನೆಯನ್ನು ಪರಿಶೀಲಿಸೋಣ.

ಒಬ್ಬ ವ್ಯಕ್ತಿ ಒಂದು ಯೋಜನೆ ಆರಂಭಿಸುತ್ತಾನೆ. 5ಮಂದಿ ಸದಸ್ಯರನ್ನು ಮಾಡಿ ಅವರಿಗೆ ತಲಾ 500ರಂತೆ ಐದು ಟಿಕೇಟುಗಳನ್ನು ಕೊಡುತ್ತಾನೆ. ಅವರು ಅದನ್ನು 5 ಮಂದಿಗೆ ಮಾರಾಟ ಮಾಡಿ, ಅವರಿಂದ ತಲಾ 500 ತದೆದು ಸಂಘಟಕನಿಗೆ ಕಳುಹಿಸಿದಾಗ ಅವರಿಗೆ ಬಹುಮಾನವಿರುತ್ತದೆ. ಈ ಯೋಜನೆಯು ಮುಂದುವರಿಯುತ್ತಾ ಹೋಗಬೇಕು. ಇಂತಹ ಯೋಜನೆ 5 ಮಂದಿಯಿಂದ ಆರಂಭವಾದರೆ, ಇದರ ಎರಡನೆಯ ಸುತ್ತಿಗೆ 25 ಮಂದಿ ಸದಸ್ಯರಿರುತ್ತಾರೆ, ಮೂರನೆ ಸುತ್ತಿಗೆ 125 ಮಂದಿ, ಹೀಗೆ ಮುಂದುವರಿಯುತ್ತಲೇ ಹೋದಲ್ಲಿ 10ನೇ ಸುತ್ತಿಗೆ 97,65,625 ಮಂದಿ ಸದಸ್ಯರು ಬೇಕು! 20 ನೇ ಸುತ್ತಿಗೆ $9.5374 \times 10^3$ ಸದಸ್ಯರು ಬೇಕು. ವಾರಕ್ಕೊಂದು ಆವರ್ತನೆಯಂತೆ ಈ ಯೋಜನೆ ನಡೆದಲ್ಲಿ, 5 ತಿಂಗಳಿನೊಳಗೆ ಅದು 20 ನೇ ಆವರ್ತನೆಗೆ ಬರುವುದು! ಇದರಿಂದಲೇ, ಈ ಯೋಜನೆಗಳು ನಡೆಯುವುದು ಅಸಾಧ್ಯವೆಂಬುದು ಸ್ಪಷ್ಟ!





ಇಂತಹ ಯೋಜನೆಗಳು ರಾಜ್ಯದ ಹಲವಾರು ಕಡೆಯಿವೆ. ಎಸ್. ಕಣ್ಣನ್ ಆಟೋ ಸರ್ಜನ್ ಎಂದು ತನ್ನನ್ನು ಕರೆಸಿಕೊಳ್ಳುವ ವ್ಯಕ್ತಿ ಇಂತಹ ಯೋಜನೆಯ ಬಗ್ಗೆ



ಪತ್ರಿಕೆಗಳಲ್ಲಿ ಪ್ರಚಾರ ಮಾಡಿದ್ದ. ಆತನ ಪ್ರಕಾರ ವಾಹನಗಳನ್ನು ಅತಿ ಕಡಿಮೆ ಬೆಲೆಗೆ ಕೊಡಬಹುದಂತೆ! ವಾಹನ ಬೇಕಾದ ಪ್ರತಿಯೊಬ್ಬನೂ ಆಂಶಿಕ ಬೆಲೆಕೊಟ್ಟು, ಸದಸ್ಯನನ್ನು ತೋರಿಸಿದರೆ ಸಾಕು! ಇಂತಹ ಯೋಜನೆಗಳು ಯಾಕೆ ನಡೆಯುವುದು ಅಸಾಧ್ಯವೆಂಬುದು ಮೇಲ್ಕಾಣಿಸಲಾದ ಲೆಕ್ಕಾಚಾರಗಳಿಂದ ಸ್ಪಷ್ಟವಾಗುತ್ತದೆ.

## ಕಡಿತದ ದರ ಮಾರಾಟಗಳು

ಕಡಿತದ ಬೆಲೆಯ ಮಾರಾಟಗಳು ಬಳಕೆದಾರರನ್ನು ಮೋಸಗೊಳಿಸುವ ಸಾಧ್ಯತೆಗಳಿವೆ. ಕೆಲವೊಮ್ಮೆ ನಿಜವಾದ ಕಡಿತದರ ಮಾರಾಟಗಳು ಇರಬಹುದಾದರೂ, ಇನ್ನುಳಿದವರು ಬೆಲೆಯನ್ನು ಹೆಚ್ಚಿಸಿ, ಆ ಬಳಿಕ ಕಡಿತವನ್ನು ಕೊಟ್ಟಂತೆ ತೋರಿಸುತ್ತಾರೆ.

ಇಂತಹ ಮಾರಾಟಗಳು ಭರ್ಜರಿ ಜಾಹೀರಾತುಗಳ, ಕರಪತ್ರಗಳ ಆಧಾರದ ಮೇಲೆಯೇ ನಡೆಯುತ್ತವೆ. ಬಳಕೆದಾರರು ಇಂತಹವುಗಳ ಬಗ್ಗೆ ಜಾಗ್ರತೆಯಿಂದಿರುವುದು ಅಗತ್ಯ. ಈ ಬಗ್ಗೆ ಮೋಸಹೋದ ಬಳಕೆದಾರರಿಗೆ ಸಹಾಯ ಮಾಡುವುದೂ ಕಷ್ಟ. ಯಾಕೆಂದರೆ, ಖರೀದಿಸಿದ ವಸ್ತುವಿನ ಗುಣಮಾಧ್ಯಮ ಕೀಳೆಂದು ತಿಳಿಯುವಾಗ ಮಾರಾಟಮಾಡಿದಾತ ಮುಂದಿನ ಊರಿಗೆ ಹೋಗಿರುತ್ತಾನೆ!

## ದೂರದ ಊರುಗಳ ಜಾಹೀರಾತುಗಳು

ಜಲಂಧರ, ಆಲಿಗಡ, ದೆಹಲಿಯ ಕಂಪೆನಿಗಳ ಜಾಹೀರಾತುಗಳನ್ನು ನೀವು ಪತ್ರಿಕೆ, ನಿಯತಕಾಲಿಕಗಳಲ್ಲಿ ಗಮನಿಸಿರಬಹುದು. ಸುಲಭದ ಲೆಕ್ಕಚಾರಗಳನ್ನು ಹಾಕಿ, ಅದನ್ನು ತುಂಬಿಸಿದವರಿಗೆ ಉಚಿತ ಬಹುಮಾನಗಳೆಂದು ಜಾಹೀರಾತು ಮಾಡಿರುತ್ತಾರೆ. ನಂಬಿದ ಬಳಕೆದಾರರು, ಜಾಹೀರಾತಾಗಿರುವ ವಸ್ತುವನ್ನು ಪಡೆಯುವ ಆಸೆಯಿಂದ ಇವರ ಸ್ಪರ್ಧೆಗೆ ಸೇರುತ್ತಾರೆ. ಆಗ, ಅಲ್ಲಿಂದ ಪತ್ರ ಬಂದು, ಉಚಿತ ಬಹುಮಾನ ದೊರೆತಿದೆ, ಆದರೆ ಅದನ್ನು ಕಳುಹಿಸುವ ಖರ್ಚು ಬೇಕೆಂದು ತಿಳಿಸಲಾಗುತ್ತದೆ. ನಂಬಿದ ಬಳಕೆದಾರರು ಹಣ ಕಳುಹಿಸಿದಾಗ, ಮುಂದೆ ಏನೂ ಸುದ್ದಿ ಬರುವುದಿಲ್ಲ! ಯಾ ಪಾರ್ಸಲ್ ಮೂಲಕ ನಿಷ್ಪ್ರಯೋಜಕ ವಸ್ತುಗಳು ಬರುತ್ತವೆ.

ಇಂತಹ ಯೋಜನೆಗೆ ಬಲಿಬಿದ್ದ ಓರ್ವ ವ್ಯಕ್ತಿಯ ವೃತ್ತಾಂತವು ಆಶ್ಚರ್ಯಕರವಾಗಿದೆ. ಸುರತ್ಕಲ್ ಎಂಬ ಊರಿನ ಬಳಕೆದಾರರು ಕಡಿಮೆ ಬೆಲೆಯ ಮಿಕ್ಸಿ ಎಂಬ ಜಾಹೀರಾತಿಗೆ ಬಲಿಬಿದ್ದು ದೆಹಲಿಯ ಯಾವುದೋ ಸಂಸ್ಥೆಯಿಂದ ಒಂದು ಮಿಕ್ಸಿಯನ್ನು ಖರೀದಿಸಿದ್ದರು. ಅದು ಕೆಲವೇ ದಿನಗಳೊಳಗೆ ಹಾಳಾಯಿತು. ಅಸಮಾಧಾನಗೊಂಡ ಇವರು ನಮ್ಮಲ್ಲಿ ದೂರು ತಂದರು. ಆಗ ನಾವು ಇಂತಹ ಮೋಸಕ್ಕೆ ಬಲಿಬಿದ್ದ ಅವರನ್ನು ತರಾಟೆಗೆ ತೆಗೆದುಕೊಂಡು, ನಿಮ್ಮ ಹಣ ಹೋಯಿತೆಂದು ತಿಳಿಸಿದೆವು. ಏನಾದರೂ ಕ್ರಮ ಸಾಧ್ಯವಿದೆಯೇ ಎಂದು ಕೇಳಿದಾಗ ಬೇಕಾದರೆ ಆ ಕಂಪೆನಿಗೆ ಬರೆದುನೋಡಿಯೆಂದೆವು. ಒಂದು ಪತ್ರವನ್ನು ಬರೆದು, ಅದರ







ಪ್ರತಿಯನ್ನು ನಮ್ಮ ಟ್ರಸ್ಟಿನ ವಿಳಾಸಕ್ಕೆ ಕಳುಹಿಸಿಕೊಟ್ಟರು. ಕೆಲವು ದಿನಗಳ ನಂತರ ಅವರನ್ನು ಭೇಟಿಯಾದಾಗ ನನಗೆ ಆಶ್ಚರ್ಯ ಕಾದಿತ್ತು! ಕಂಪೆನಿಯವರು ಅವರ ಹಣವನ್ನು ಹಿಂತಿರುಗಿಸಿದ್ದರಂತೆ!

## ಮೋಸ ಮಾಡುವ ಲಕ್ಕಿನಂಬ್ರ

ಕೆಲವು ಹೆಸರಾಂತ ಸಂಸ್ಥೆಗಳು ಕೂಡಾ ಮೋಸಮಾಡುವ ಲಾಟರಿಗಳನ್ನು ನಡೆಸುತ್ತವೆ. ರೀಡರ್ಸ್ ಡೈಜೆಸ್ಟ್ ಎಂಬ ನಿಯತಕಾಲಿಕದ ಮಾರಾಟಕ್ಕೆ ಇಂತಹದೇ ಒಂದು ಉಪಾಯವನ್ನು ಮಾಡಿದ್ದರು.

ಪ್ರತಿಯೊಬ್ಬ ಟೆಲಿಫೋನ್ ಇದ್ದ ವ್ಯಕ್ತಿಗೆ ಪೋಸ್ಟ್ ಮೂಲಕ ಈ ನಿಯತಕಾಲಿಕದ ಒಂದು ಪತ್ರ ಬಂತು. ಅದರಲ್ಲಿ ಲಕ್ಕಿ ಕೂಪನ್ ಎಂದಿತ್ತು. ಅದರಲ್ಲಿರುವ ನಂಬ್ರಗಳ ಮೊತ್ತ ಇಷ್ಟಾದರೆ ಒಂದು ಬಹುಮಾನ, ಇಷ್ಟಾದರೆ ಎರಡು, ಮತ್ತಷ್ಟಾದರೆ ಮೂರು ಎಂದು ತಿಳಿಸಲಾಗಿತ್ತು. ಆದರೆ, ವಿಶೇಷವೇನೆಂದರೆ ಪ್ರತಿಯೊಬ್ಬರಿಗೂ ಬಂದ ಲಕ್ಕಿಕೂಪನ್‌ನಲ್ಲಿದ್ದ ಸಂಖ್ಯೆಯ ಮೊತ್ತದ ಪ್ರಕಾರ, ಅವರಿಗೆ ಮೂರು ಬಹುಮಾನಗಳು ಸಿಕ್ಕುವಹಾಗಿತ್ತು.

ಈ ಬಗ್ಗೆ ನಾವು ಎಂ.ಆರ್.ಟಿ.ಪಿ. ಕಮಿಷನಿಗೆ ದೂರು ಸಲ್ಲಿಸಿದೆವು. ಮಾತ್ರವಲ್ಲದೆ, ಕೆಲವು ಪ್ರತಿಷ್ಠಿತ ಪತ್ರಿಕೆಗಳಿಗೂ ಈ ಬಗ್ಗೆ ಲೇಖನ ಬರೆದೆವು. ರೀಡರ್ಸ್ ಡೈಜೆಸ್ಟ್ ಕಂಪೆನಿಯಿಂದ ನಮಗೆ ಬಹಳಷ್ಟು ಪತ್ರಗಳು ಬಂದುವು. ತಮ್ಮದ್ದು ಜಗತ್ಪ್ರಸಿದ್ಧ ಉತ್ಕೃಷ್ಟ ಮ್ಯಾಗಜೈನ್ ಎಂದೂ ತಿಳಿಸಿದರು! ಅದಕ್ಕೆ ನಾವು ನಿಮ್ಮ ನಿಯತಕಾಲಿಕದ ಗುಣಮಟ್ಟದ ಬಗ್ಗೆ ನಾವೇನೂ ಹೇಳಿಲ್ಲ. ಆದರೆ, ಇದರ ಮಾರಾಟವನ್ನು ಹೆಚ್ಚಿಸಲು ನೀವೇಕೆ ಈ ರೀತಿಯ ವಿಧಾನಗಳ ಪ್ರಯೋಗ ಮಾಡುತ್ತೀರಿ? ಎಂದು ಮರು ಪ್ರಶ್ನೆ ಹಾಕಿದೆವು.

ಎಂ.ಆರ್.ಡಿ.ಪಿ. ಕಮಿಷನ್‌ನಲ್ಲಿ ಈ ಬಗ್ಗೆ ದಾವೆ ನಡೆಯಿತು. ಈಗ ಈ ಕಂಪೆನಿಯವರು ಈ ರೀತಿಯ ಲಕ್ಕಿನಂಬ್ರು ಪ್ರಚಾರದ ವಿಧಾನವನ್ನು ಕೈ ಬಿಟ್ಟಿದ್ದಾರೆ.

ಜಾಹೀರಾತು, ಅಬ್ಬರದ ಪ್ರಚಾರ, ಆಕರ್ಷಕ ಕೊಡುಗೆ ಇತ್ಯಾದಿಗಳಿಗೆ ಮರುಳಾಗಬಾರದೆಂದು ಬಳಕೆದಾರರಿಗೆ ಶಿಕ್ಷಣ ಕೊಡಬೇಕು. ಮೇಲ್ಕಾಣಿಸಲಾದ ನಿದರ್ಶನಗಳು ಈ ನಿಟ್ಟಿನಲ್ಲಿ ಸಹಾಯಕವಾಗಬಹುದು.

## ಜಾಹೀರಾತುಗಳು

ಸತ್ಯನಿಷ್ಠವಾಗಿರಬೇಕು

ಬೆಲೆಗಳನ್ನು ಪ್ರಾಮಾಣಿಕವಾಗಿ ನಮೂದಿಸಿರಬೇಕು.

ಮಾರಾಟದ ಅವಧಿಯು ನ್ಯಾಯಯುತವಾಗಿರಬೇಕು.







ಬಳಕೆದಾರರಿಗೆ ಆಮಿಷವನ್ನೊಡ್ಡುವಂತಿರಬಾರದು.

ಯಾವುದೇ ವಸ್ತುವಿನ / ಸೇವೆಯ ಮಾರಾಟವನ್ನು ಹೆಚ್ಚಿಸುವ ಸ್ಪರ್ಧೆ, ಉಚಿತ ಕೊಡುಗೆಗಳನ್ನು ನಿಷೇಧಿಸಲಾಗಿದೆ.

ತಪ್ಪು ದಾರಿಗೆಳೆಯುವ ಜಾಹೀರಾತುಗಳ ಬಗ್ಗೆ, ಅವುಗಳಿಂದ ನಷ್ಟ ಅನುಭವಿಸಿದವರು ಎಂ.ಆರ್.ಟಿ.ಪಿ. ಕಾಯಿದೆಯ ಸೆಕ್ಷನ್ 34 – Aರನ್ವಯ ದಾವೆ ಹೂಡಬಹುದು. ಈ ಕಾಯಿದೆಯಡಿಯಲ್ಲಿ ಕ್ರಮ ಕೈಗೊಳ್ಳುವ ಅಧಿಕಾರವನ್ನು ಈಗ ಗ್ರಾಹಕ ರಕ್ಷಣಾ ಕಾಯಿದೆಯಲ್ಲಿ ಬರುವ ಗ್ರಾಹಕ ವ್ಯಾಜ್ಯ ಪರಿಹಾರ ವೇದಿಕೆಗಳಿಗೂ ನೀಡಲಾಗಿದೆ.

ಬೇವಿನ ಟ್ರಿಪಲ್ ಗೇನ್ ಕೊಡುಗೆ !

Mango

ಉಚಿತ !

Chek

ಉಚಿತ !

Neem

ಬಳಕೆದಾರರೇ ಎಚ್ಚೆತ್ತುಕೊಳ್ಳಿ





# ಆಹಾರ, ಔಷಧಗಳಲ್ಲಿ ಮೋಸದ ಜಾಹೀರಾತುಗಳು

**ಈ** ವಸ್ತುಗಳ ಜಾಹೀರಾತುಗಳಿಗೂ ಇತರ ಜಾಹೀರಾತುಗಳಿಗೆ ಅನ್ವಯವಾಗುವ ವಿಷಯಗಳು ಸಮಾನವಾದರೂ ಇವುಗಳಲ್ಲಿ ಕೆಲವು ವಿಶೇಷ ಅಂಶಗಳಿರುವ ಕಾರಣ ಇವುಗಳಿಗೆ ಬೇರೆಯೇ ಅಧ್ಯಾಯವನ್ನು ಮೀಸಲಾಗಿರಿಸಲಾಗಿದೆ.

## ಶಾಲೆಗಳಲ್ಲಿ ಮಾರಾಟವಾದ ಮ್ಯಾಗಿ ನ್ಯೂಡಲ್ಸ್

ನ್ಯೂಡಲ್ಸ್ ಯನೆ ಶ್ಯಾವಿಗೆಯನ್ನು ಮಕ್ಕಳು ನೋಡಿದಾಗ ಅದು ಹುಳದಂತಿದೆಯೆಂದು ನಿರಾಕರಿಸುವ ಸಮಯವೊಂದಿತ್ತು. ಆದರೆ ಈಗ ಅದು ಮಾರಾಟವಾಗುವ ಭರವನ್ನು ನೋಡಿದವರು ಇದನ್ನು ನಂಬಲಿಕ್ಕಿಲ್ಲ. ನಮ್ಮ ದೇಶದಲ್ಲಿ ಈ ಉತ್ಪನಕ್ಕೆ ಮಾರುಕಟ್ಟೆಯನ್ನು ಕಲ್ಪಿಸಿದ ರೀತಿಯು ಸ್ವಾರಸ್ಯಕರ.

ಸುಮಾರು 10 ವರ್ಷಗಳ ಹಿಂದೆ, ಈ ನ್ಯೂಡಲ್ಸ್‌ಗಳನ್ನು ತಯಾರಿಸುವ ನೆಸ್ಲೆ ಕಂಪೆನಿಯ ಪ್ರಚಾರ ಭರದಿಂದ ಸಾಗಿತ್ತು. ತಮ್ಮ ಉತ್ಪನ್ನಕ್ಕೆ ಬೇಡಿಕೆ ಕಲ್ಪಿಸಲು ಹಾಗೂ ಮಾರಾಟ ಹೆಚ್ಚಿಸಲು ಈ ಕಂಪೆನಿ ಹೊಸತೊಂದು ಸ್ಪರ್ಧೆಯನ್ನು ಆರಂಭಿಸಿತು. ಇವರ ಪ್ರಚಾರಕರು ಶಾಲೆಗಳಿಗೆ ಹೋಗಿ, ತಮ್ಮ ಮ್ಯಾಗಿಯ ಒಂದು ಪೊಟ್ಟಣವನ್ನು ಉಚಿತವಾಗಿ ಹಂಚಿದರು. ಇದರೊಂದಿಗೆ ಸ್ಪರ್ಧೆಯೊಂದಕ್ಕೆ ಪ್ರವೇಶ ಪತ್ರವೂ ಇತ್ತು. ಸ್ಪರ್ಧೆಯಲ್ಲಿ ಆತ್ಯಾಕರ್ಷಕ ಬಹುಮಾನಗಳು. ಆದರೆ, ಅದರೊಂದಿಗೆ ಮ್ಯಾಗಿ ನ್ಯೂಡಲ್ಸ್ 4 ಖಾಲಿ ಪ್ಯಾಕೆಟುಗಳನ್ನು ಇರಿಸಬೇಕು. ಅವರಿಗೆ ಶಾಲೆಯಲ್ಲಿ ಕೊಟ್ಟ ಪ್ಯಾಕೆಟು ಈ ಸ್ಪರ್ಧೆಗೆ ಉಪಯೋಗವಾಗುವಂತಿಲ್ಲ! ಶಾಲಾಸಮಯದಲ್ಲಿ, ಶಾಲೆಯೊಳಗೆ ಇದನ್ನು ಹಂಚಿದ ಕಾರಣ ಕೆಲವು ಮಕ್ಕಳಿಗೆ ಇದು ಶಾಲೆಯ ಚಟುವಟಿಕೆಯೇ ಎಂಬಂತಾಯಿತು. ಮನೆಯಲ್ಲಿ ತಂದೆ–ತಾಯಂದಿರನ್ನು ಪೀಡಿಸತೊಡಗಿದರು. ನಮ್ಮ ಟ್ರಸ್ಟಿಗೆ ಈ ಬಗ್ಗೆ ದೂರು ಬಂತು.

ನಾವು ಈ ಬಗ್ಗೆ ಬಲವಾಗಿ ಪ್ರತಿಭಟಿಸಿದೆವು. ಶಾಲಾ ಸಮಯದಲ್ಲಿ ಇಂತಹ ಪ್ರಚಾರಗಳಿಗೆ ಅವಕಾಶಕೊಡಬಾರದಾಗಿ ಶಿಕ್ಷಣಾಧಿಕಾರಿಗಳನ್ನು ಕೇಳಿಕೊಂಡೆವು. ಮುಂದೆ, 1984ರಲ್ಲಿ ಎಂ.ಆರ್.ಟಿ.ಪಿ. ಕಾಯಿದೆಯ ಸೆಕ್ಷನ್ –34A ಜಾರಿಗೆ ಬಂದ ಮೇಲೆ ವಸ್ತುಗಳ ಮಾರಾಟವನ್ನು ಹೆಚ್ಚಿಸಲು ಸ್ಪರ್ಧೆಗಳನ್ನು ನಡೆಸುವುದು ಅಪ್ರಾಮಾಣಿಕ ವಾಣಿಜ್ಯ ವ್ಯವಹಾರ (unfair trade practice) ಎಂದಾಯಿತು.







## ಹೆಚ್ಚು ಶಕ್ತಿ, ಉತ್ಸಾಹ ಕೊಡುವ ಪೇಯಗಳು

ನಮ್ಮಲ್ಲಿ ಜಾಹೀರಾತುಗಳನ್ನು ನಂಬಿ, ತಮ್ಮ ಮಕ್ಕಳಿಗೆ ಯಾವ್ಯಾವುದೋ ತಯಾರಿಕೆಗಳನ್ನು ಕೊಡುವವರಿದ್ದಾರೆ. ತಾಯಂದಿರಿಗಂತೂ ತಮ್ಮ ಮಕ್ಕಳು ಇತರರಿಗಿಂತ ಬುದ್ಧಿವಂತ, ಶಕ್ತಿವಂತರಾಗಿ ಬೆಳೆಯಬೇಕೆಂಬ ಆಸೆ. ಇದರ ದುರುಪಯೋಗ ಪಡಿಸಿಕೊಳ್ಳುವ ಸಾಕಷ್ಟು ಮಂದಿ ಜಾಹೀರಾತುಗಾರರಿದ್ದಾರೆ.

ಟಿ.ವಿ., ಪತ್ರಿಕೆ ಮುಂತಾದುವುಗಳಲ್ಲಿ ಹಾರ್ಲಿಕ್ಸ್, ಬೋರ್ನ್‌ವಿಟಾ, ಬೂಸ್ಟ್ ಇತ್ಯಾದಿ ಪೇಯಗಳ ಜಾಹೀರಾತುಗಳನ್ನು ತಾವೆಲ್ಲರೂ ಗಮನಿಸಿರಬೇಕು. ಇವು ಆರೋಗ್ಯಕ್ಕೆ ಉತ್ತಮವೆಂದೂ ತಿಳಿದಿರಬೇಕು. ವಾಸ್ತವವಾಗಿ ಇವುಗಳಲ್ಲೇನೂ ವಿಶೇಷ ಗುಣಗಳಿಲ್ಲವೆಂದರೆ ಆಶ್ಚರ್ಯವಾಗಬಹುದು. ಆದರೆ, ಇದು ವಾಸ್ತವಿಕತೆ. ಇವು ಅಧಿಕ ಶಕ್ತಿ – ಉತ್ಸಾಹಗಳನ್ನೂ ಕೊಡುವುದಿಲ್ಲ, ವಿಟಾಮಿನ್‌ಗಳೇನೂ ಗಣನೀಯ ಪ್ರಮಾಣದಲ್ಲಿಲ್ಲವೆಂದರೆ ನೀವು ನಂಬುತ್ತೀರಾ?

ಇವುಗಳಲ್ಲಿರುವುದು ಕೊಕೋ, ಮಾಲ್ಟ್, ಸಕ್ಕರೆಯಷ್ಟೇ. ಕೆಲವಲ್ಲಿ ಕೊಬ್ಬು ತೆಗೆಯಲ್ಪಟ್ಟ ಹಾಲಿನ ಹುಡಿಯೂ ಇರಬಹುದು. ಇವುಗಳು ಗ್ರಾಂಗೆ 4 – 5 ಕಿ.ಕ್ಯಾಲರಿಯಷ್ಟು ಶಕ್ತಿ ಒದಗಿಸುತ್ತವಷ್ಟೇ. 1 ಗ್ರಾಂ ಸಕ್ಕರೆ ದೇಹಕ್ಕೆ 4 ಕಿ. ಕ್ಯಾಲರಿಯಷ್ಟು ಶಕ್ತಿ ಒದಗಿಸುವುದು. ತತ್ಕಾರಣ, ಹಾಲಿಗೆ ಸಕ್ಕರೆ ಹಾಕುವುದೂ ಒಂದೇ, ಇವುಗಳನ್ನು ಬೆರೆಸುವುದೂ ಒಂದೇ. ಆದರೆ ಸಕ್ಕರೆಗೆ ಕಡಿಮೆ ಬೆಲೆ! ಇವನ್ನು ಹಾಲಿಗೆ ಸ್ವಾದ ಕೊಡುವ ಅತಿ ದುಬಾರಿ ವಿಧಾನವೆಂದು ಹೇಳಲಾಗಿದೆ. ಹಾರ್ಲಿಕ್ಸ್‌ನ್ನು ನಮ್ಮ ದೇಶದಲ್ಲಿ ಅಧಿಕ ಶಕ್ತಿ, ಉತ್ಸಾಹ ಕೊಡುವ ಪೇಯವೆಂದು ಮಾರಾಟಮಾಡಲಾಗುತ್ತದೆ. ಆದರೆ, ಇದನ್ನೇ ಪಾಶ್ಚಾತ್ಯ ದೇಶಗಳಲ್ಲಿ ಚೆನ್ನಾಗಿ ನಿದ್ರೆ ಬರಿಸುವ ಪೇಯವೆಂದು ಮಾರಾಟಮಾಡಲಾಗುತ್ತದೆ! ಎಂತಹ ಪವಾಡ! ಒಂದು ದೇಶದ ಜನಗಳಿಗೆ ಅಧಿಕ ಶಕ್ತಿ ಉತ್ಸಾಹ ಕೊಡುವ ವಸ್ತು ಇನ್ನೊಂದು ಕಡೆಯ ಜನಗಳಿಗೆ ನಿದ್ರೆ ಬರುವ ಹಾಗೆ ಮಾಡುತ್ತಿದೆ!

ಈ ಪೇಯಗಳು ಅತ್ಯಧಿಕ ಬೆಲೆಯವಾಗಿದ್ದು, ಬಣ್ಣ-ಬಣ್ಣದ ಬಾಟಲು, ಡಬ್ಬಗಳಲ್ಲಿ ಸಿಗುತ್ತವೆ. ಇವುಗಳ ಒಳಗಿರುವ ವಸ್ತುವಿಗಿಂತಲೂ ಹೊರಗಿನ ಡಬ್ಬಿ ಯಾ ಬಾಟಲಿನ ಕ್ರಯ ಹೆಚ್ಚು. ಇವುಗಳ ಮಾರಾಟ ಬರೇ ಪ್ರಚಾರದಿಂದ ಮಾತ್ರವಾಗುವುದು!





## ಆಕ್ಯು ಪ್ರೆಶ್ಯರ್ ಚಪ್ಪಲಿ

ಇದೊಂದು ಸರ್ವರೋಗ ನಿವಾರಣೆಯೆಂದು ಹೆಸರು ಪಡೆದಿತ್ತು. ಇದರ ಜಾಹೀರಾತುಗಳಂತೂ ಅತ್ಯಾಕರ್ಷಕ. ಎರಡು ಪಾದಗಳ ಚಿತ್ರಗಳ ಮೇಲೆ ಅಲ್ಲಲ್ಲಿ ಗುಳ್ಳೆಗಳನ್ನು ಬಿಡಿಸಲಾಗಿತ್ತು. ಒಂದೊಂದರೊಳಗೆ ದೇಹದ ಒಂದೊಂದು ಅಂಗದ ಹೆಸರನ್ನು ಬರೆಯಲಾಗಿತ್ತು. ಬಳಿಯಲ್ಲೇ ಈ ಚಪ್ಪಲಿಯ ಚಿತ್ರ. ಮೇಲ್ನೋಟಕ್ಕೆ ಇದು



ಮೇಲ್ಭಾಗದಲ್ಲಿ ಮುಳ್ಳುಗಳಿರುವ ಸಾಮಾನ್ಯ ಚಪ್ಪಲಿಯಂತಿದ್ದರೂ, ಜಾಹೀರಾತಿನಲ್ಲಿ ಇದರ ಪವಾಡ ಸದೃಶ ಕಾರ್ಯವಿಧಾನದ ಬಣ್ಣನೆಯಿತ್ತು.

ಇದನ್ನು ಧರಿಸಿ, 10 ನಿಮಿಷ ಓಡಾಡಿದರೆ ಸಾಕಂತೆ. ಎಲ್ಲಾ ರೋಗಗಳೂ ಗುಣವಾಗಿ, ಧರಿಸಿದಾತರು ಆರೋಗ್ಯವಂತರಾಗುತ್ತಾರಂತೆ! ಜೊತೆಯಲ್ಲಿ Approved by the W.H.O. ಅರ್ಥಾತ್ ಈ ಚಪ್ಪಲಿಗೆ ಜಾಗತಿಕ ಆರೋಗ್ಯ ಸಂಸ್ಥೆಯ ಮನ್ನಣೆಯಿದೆಯಂತೆ! ನನಗಂತೂ ಈ ಚಪ್ಪಲಿಯ ಜಾಹೀರಾತನ್ನು ಗಮನಿಸಿ ಆನಂದವಾಯಿತು. ಮನೆಗೊಂದರಂತೆ ಇಂತಹ ಚಪ್ಪಲಿಯನ್ನು ಹಂಚಿದರಾಯಿತು. ಬಳಿಕ, ಎಲ್ಲಾ ಆಸ್ಪತ್ರೆಗಳನ್ನು ಮುಚ್ಚಬಹುದು, ವೈದ್ಯರನ್ನು ಮನೆಗೆ ಕಳುಹಿಸಬಹುದು, ಔಷಧೋದ್ಯಮ ಹೇಳಹೆಸರಿಲ್ಲವಾಗುವಂತಹ ಪರಿಸ್ಥಿತಿಯಾಗುವುದು! ತತ್ಕಾರಣ, ಈ ಬಗ್ಗೆ ಜಾಗತಿಕ ಆರೋಗ್ಯ ಸಂಸ್ಥೆಗೆ ಬರೆದೆವು. ಅಲ್ಲಿಂದ ಉತ್ತರ ಬಂತು. ತಾವೇನೂ ಈ ಚಪ್ಪಲಿಗೆ ಮನ್ನಣೆ ಕೊಡಲಿಲ್ಲವೆಂದರು. ಈ ಪತ್ರದ ಪ್ರತಿಯನ್ನು ಈ ಚಪ್ಪಲಿಯ ತಯಾರಕರಿಗೆ ಕಳುಹಿಸಿ, ಜಾಹೀರಾತನ್ನು ನಿಲ್ಲಿಸಬೇಕೆಂದು ಕೇಳಿಕೊಂಡೆವು. ಜಾಹೀರಾತಿನಲ್ಲಿ ಜಾಗತಿಕ ಆರೋಗ್ಯ ಸಂಸ್ಥೆಯ ಹೆಸರು ಕಾಣೆಯಾಯಿತು. ಆದರೆ, ಜಾಹೀರಾತುಗಳು ಮುಂದುವರಿದುವು!

ನಾವು ಈ ಚಪ್ಪಲಿಯ ಜಾಹೀರಾತು ಸೆಕ್ಷನ್ 34 – Aಯಡಿಯಲ್ಲಿ ನಿಷೇಧಿಸಬಹುದಾದದ್ದೆಂದು ಎಂ.ಆರ್.ಟಿ.ಪಿ. ಕಮಿಷನಿಗೆ ದೂರು ಸಲ್ಲಿಸಿದೆವು. ಅಲ್ಲಿಂದ, ಒಂದು ಜೋಡಿ ಚಪ್ಪಲಿಯನ್ನು ಜಪ್ತಿ ಮಾಡಿ, ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ ತನಿಖೆಗಾಗಿ ಕಳುಹಿಸಲಾಯಿತು. ಅಲ್ಲಿಂದ ಬಂದ ವರದಿಯ ಪ್ರಕಾರ, ಈ ಚಪ್ಪಲಿ ಯಾವುದೇ ರೋಗವನ್ನು ಗುಣಮಾಡುವುದಿಲ್ಲ ಮಾತ್ರವಲ್ಲ ಇದು ಚಪ್ಪಲಿಯಾಗಿ ಉಪಯೋಗಕ್ಕೂ ಅಯೋಗ್ಯವೆಂದಾಯಿತು!

ಚಪ್ಪಲಿಯ ತಯಾರಕರು ಎಂ.ಆರ್.ಡಿ.ಪಿ. ಕಮಿಷನ್‌ಗೆ ಕ್ಷಮೆ ಯಾಚಿಸಿ ಮುಂದೆ ಇಂತಹ ಜಾಹೀರಾತುಗಳನ್ನು ಮಾಡುವುದಿಲ್ಲವೆಂದು ತಿಳಿಸಿದರು. ಅವರಿಗೆ ಜುಲ್ಮಾನೆಯೂ ಆಯಿತು.

ಇದೇ ಕಾಯಿದೆಯ ಪ್ರಕಾರ, ಈ ಸೆಕ್ಷನಿನಲ್ಲಿ ನಿಷೇಧವಾದ ಜಾಹೀರಾತಿಗೆ ಮರುಳಾಗಿ ಯಾವುದೇ ವಸ್ತುವನ್ನು ಖರೀದಿಸಿದ ಬಳಕೆದಾರರು ಪರಿಹಾರವನ್ನು ಪಡೆಯಬಹುದು. ಈ ಬಗ್ಗೆ ನಾವು ಸಾಕಷ್ಟು ಪ್ರಚಾರ ಕೊಟ್ಟರೂ, ಈ ಚಪ್ಪಲಿಯನ್ನು ಖರೀದಿಸಿದ 2 ಲಕ್ಷದಷ್ಟು ಬಳಕೆದಾರರಲ್ಲಿ ಯಾರೂ ಮುಂದಾಗಲಿಲ್ಲ! ನಮ್ಮ ಜನರಲ್ಲಿನ ಅಸಡ್ಡೆ, ಆಲಸ್ಯ ಅಷ್ಟೊಂದಿದೆ.







## ಆಸ್ತಮಾ ಔಷಧಿ

ಆಸ್ತಮಾ ರೋಗಕ್ಕೆ ಔಷಧವಿಲ್ಲವೆಂಬುದು ಸಾಮಾನ್ಯವಾಗಿ ತಿಳಿದಿದೆ. ಆದರೆ, ಈ ರೋಗದ ಗುಣಕ್ಕೆ ಹಾತೊರೆಯುವವರು ಯಾವುದಕ್ಕೂ ಸಿದ್ಧರಿರುತ್ತಾರೆ. ತತ್ಕಾರಣ, ಆಸ್ತಮಾ ರೋಗಕ್ಕೆ ಔಷಧವನ್ನು ಅತ್ಯಧಿಕ ಬೆಲೆಗೆ ಮಾರಾಟಮಾಡುವ ಹಲವಾರು ಜಗದ್ವಿಖ್ಯಾತ, ಆಸ್ತಮಾತಜ್ಞರು ನಮ್ಮಲ್ಲಿದ್ದಾರೆ! ಇಂತಹ ಔಷಧಗಳಲ್ಲಿ ತಯಾರಕರು ಸ್ಟಿರ್ರಾಯ್ಡ್‌ಗಳನ್ನು ಸೇರಿಸುತ್ತಿದ್ದು, ಅದರಿಂದಾಗಿ ರೋಗಿಗೆ ಕೂಡಲೇ ಉಪಶಮನವಾಗುತ್ತದೆ. ಆದರೆ, ಇದು ತೀರಾ ತಾತ್ಕಾಲಿಕ. ಈ ಸ್ಟಿರ್ರಾಯ್ಡ್‌ಗಳ ದೀರ್ಘಾವಧಿ ಉಪಯೋಗದಿಂದ ಸಾಕಷ್ಟು ದುಷ್ಪರಿಣಾಮಗಳಿರುವ ಕಾರಣ, ಇವುಗಳನ್ನು ಜಾಗ್ರತೆಯಿಂದ ಉಪಯೋಗಿಸಬೇಕಾಗುತ್ತದೆ. ತಿಳಿದ ವೈದ್ಯರು ಇವುಗಳ ಬಗ್ಗೆ ಜಾಗ್ರತೆಯಿಂದಿರುತ್ತಾದರೂ, ಅಳಲೇಕಾಯಿ ಪಂಡಿತರುಗಳಿಗೆ ಇಂತಹ ಕಾಳಜಿಯೇನೂ ಇರುವುದಿಲ್ಲ.

ಇಂತಹ ಓರ್ವನ ಆಸ್ತಮಾ ನಿವಾರಣಾ ಶಿಬಿರವನ್ನು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರೂ, ಔಷಧ ಚಿಕಿತ್ಸಾ ಶಾಸ್ತ್ರದ ಮುಖ್ಯಸ್ಥರೂ ಆಗಿರುವವರೋರ್ವರು ಉದ್ಘಾಟಿಸಿದರು. ಈ ಬಗ್ಗೆ ನಾವು ತೀವ್ರವಾದ ಪ್ರತಿಭಟನೆಯನ್ನು ವ್ಯಕ್ತಪಡಿಸಿದೆವು. ಯಾಕೆಂದರೆ, ಇಂತಹ ಶಿಬಿರಗಳನ್ನು ಇವರು ಉದ್ಘಾಟಿಸಿದರೆ, ಜನಗಳು ಇಲ್ಲಿ ನಿಜವಾದ ಔಷಧವಿರುವುದೆಂದು ಭಾವಿಸಿ, ಮೋಸ ಹೋಗುವ ಸಾಧ್ಯತೆಗಳಿವೆ. ಈ ಬಗ್ಗೆ ನಾವು ನಮ್ಮ ಜಿಲ್ಲೆಯ ವೈದ್ಯಕೀಯ ಸಂಘಕ್ಕೂ ದೂರು ಸಲ್ಲಿಸಿದೆವು.

## ಶೀತಕ್ಕೆ ಔಷಧವಿದೆಯೆ?

Common cold if treated lasts for a week, if not it is cured within seven days.

ಶೀತವು ಔಷಧ ಕೊಟ್ಟಲ್ಲಿ ಒಂದುವಾರವಿರುವುದು, ಕೊಡದಿದ್ದಲ್ಲಿ ಏಳುದಿನಗಳಲ್ಲಿ ಗುಣವಾಗುವುದು.

ಇದು ವೈದ್ಯಕೀಯ ಔಷಧಶಾಸ್ತ್ರ ಪಠ್ಯ ಪುಸ್ತಕಗಳಲ್ಲಿರುವ ಸತ್ಯಮಾತು. ಆದರೆ, ಇದನ್ನು ನಂಬದ ನಾವು ಶೀತವಾದಾಗ ವಿವಿಧ ರೀತಿಯ ಮಾತ್ರೆ, ಅಂಟು–ಅಂಟಿನ ಮುಲಾಮುಗಳು, ಸಿರಪ್‌ಗಳು, ಮೂಗಿನಡಿಯಲ್ಲಿ ಹಿಡಿಯುವ ಇನ್‌ಹೇಲರ್‌ಗಳನ್ನು ಉಪಯೋಗಿಸುತ್ತೇವೆ.



ಹೆಚ್ಚಿನ 'ಶೀತನಿವಾರಕ' ಔಷಧಗಳಲ್ಲಿ ನೀಲಗಿರಿ ತೈಲ ಮತ್ತು ಕರ್ಪೂರವಿರುತ್ತದೆ. ಈ ವಸ್ತುಗಳು ತೀಕ್ಷ್ಣವಾದ ವಾಸನೆಯುಳ್ಳವವಾಗಿದ್ದು, ಮೂಗು ತೆರದ ಅನುಭವವನ್ನು ಉಂಟುಮಾಡುತ್ತವೆ. ಆದರೆ, ಇವುಗಳಲ್ಲಿರುವ ಯಾವುದೇ ರಾಸಾಯನಿಕಕ್ಕೆ ಶೀತದ ವೈರಸ್‌ಗಳನ್ನು ಕೊಲ್ಲುವ ಯಾ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುವ ಗುಣವಿಲ್ಲ.



ಆದರೂ ನಾವು ಇವು ನಮ್ಮ ಶೀತವನ್ನು ಗುಣಪಡಿಸುತ್ತವೆಂದು ನಂಬುತ್ತೇವೆ. ಕಾರಣವೇನು? ಇವುಗಳ ಜಾಹೀರಾತುಗಳು! ಮಳೆಯಲ್ಲಿ ಒದ್ದೆಯಾಗಿ ಬಂದ ಮಗುವಿಗೆ ತಾಯಿ ಅರ್ಧಬಾಟಲು ವಿಕ್ಸ್‌ವೇಪೊರಬ್ ಹಚ್ಚುತ್ತಾಳೆ. ಸ್ವಸ್ಥವಾಗಿ ಮಲಗಿದ ಮಗುವಿನ ಎದೆಯ ಮೇಲೂ, ಶ್ವಾಸನಾಳಗಳಮೇಲೂ ಇದರ ಔಷಧಯುಕ್ತ ಆವಿ ಕೆಲಸಮಾಡುತ್ತದೆ! ಮರುದಿನ ಮಗು ಏಳುವಾಗ ಶೀತ ಹೇಳಹೆಸರಿಲ್ಲದೆ ನಾಪತ್ತೆ! ಇವೆಲ್ಲವೂ ಜಾಹೀರಾತುಗಳಲ್ಲಿ ಮಾತ್ರ ಸಾಧ್ಯ! ಆದರೆ ಇವುಗಳ ಪ್ರಭಾವ ಎಷ್ಟಿದೆಯೆಂದರೆ, ಮತ್ತು ಈ ಉತ್ಪನ್ನಗಳನ್ನು ಹಚ್ಚಿದಾಗ ಚರ್ಮದ ಕೆರಳಿಕೆಯುಂಟಾಗಿ ಬಿಸಿಯಾಗುವ ಅನುಭವದಿಂದ ಎಲ್ಲರೂ ಈ ಜಾಹೀರಾತುಗಳನ್ನು ನಂಬುತ್ತಾರೆ!

ಈ ಜಾಹೀರಾತುಗಳಂತೂ ಬಹಳ ಜಾಣ್ಮೆಯಿಂದ ತಯಾರಾಗಿರುತ್ತವೆ. ಇವುಗಳಲ್ಲಾಗಲಿ, ವಿಕ್ಸ್ ವೇಪೋರಬ್‌ನ ಬಾಟಲಿಯ ಮೇಲಾಗಲಿ, ಈ ಉತ್ಪನ್ನವು ಶೀತವನ್ನು ಗುಣಪಡಿಸುತ್ತದೆ ಎಂಬ ವಾಕ್ಯಗಳು ಕಾಣಸಿಗುವುದಿಲ್ಲ! ಶೀತದ ನಿವಾರಣೆಗೆ, ಕುಟುಂಬದ ಶೀತ ಔಷಧಿ, ಇತ್ಯಾದಿ ಶಬ್ದಗಳನ್ನು ಕಾಣಬಹುದು. ಇದಲ್ಲದೆ, ಇದರ ಲೇಬಲ್‌ನ ಮೇಲೆ ಅತಿ ಚಿಕ್ಕ ಅಕ್ಷರಗಳಲ್ಲಿ ಒಂದು ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳ ಮೂಗಿನ ಹೊಳ್ಳೆಗಳಿಗೆ ಇದನ್ನು ನೇರವಾಗಿ ಹಚ್ಚಬಾರದೆಂಬ ಶಬ್ದಗಳು, ಭೂತಗನ್ನಡಿಯಲ್ಲಿ ಓದುವಂತಹ ಅಕ್ಷರಗಳಲ್ಲಿ ಬರೆಯಲ್ಪಟ್ಟಿವೆ. ಕಾರಣವೇನು? ಕರ್ಪೂರ ಇರುವ ಮುಲಾಮನ್ನು ನೇರವಾಗಿ ಮೂಗಿಗೆ ಹಚ್ಚಿದರೆ, ಅದು ಹೀರಲ್ಪಟ್ಟು, ರಕ್ತವನ್ನು ಸೇರಿ, ಮಗುವಿನ ಹೃದಯ ಕೂಡಲೇ ನಿಂತುಬಿಡಬಹುದು. ಮಗು ಈ ರೀತಿಯಿಂದ ಸತ್ತಲ್ಲಿ, ವಿಕ್ಸ್ ತಯಾರು ಮಾಡುವ ಈ ಕಂಪೆನಿಯು ತನ್ನ ಹೊಣೆಯಿಂದ ನುಣಿಚಿಕೊಳ್ಳಲು ಈ ಶಬ್ದಗಳನ್ನು ಸೇರಿಸಿದೆ! ಅದೂ, ಅತಿ ಚಿಕ್ಕ ಅಕ್ಷರಗಳಲ್ಲಿ, ಇಂಗ್ಲಿಷ್ ಭಾಷೆಯಲ್ಲಿ!

ಒಟ್ಟಿನಲ್ಲಿ ನಮ್ಮ ದೇಶದಲ್ಲಿ ಔಷಧ ಬಳಕೆದಾರರ ಶೋಷಣೆ ನಡೆಯುತ್ತಲೇ ಇದೆ. ಈ ಬಗ್ಗೆ ಹೆಚ್ಚಿನ ವಿವರಣೆಗಳು ಡಾ. ಗೋಪಾಲ ದಾಬಡೆಯವರು ಬರೆದಿರುವ ನಿಷೇಧಿತ ಮತ್ತು ಹಾನಿಕಾರಕ ಔಷಧಗಳು ಎಂಬ ಪುಸ್ತಕದಲ್ಲಿವೆ.

ಬಳಕೆದಾರರು ನೆನಪಿಡಬೇಕಾದ ಮುಖ್ಯಾಂಶಗಳೇನೆಂದರೆ – ಸಮತೂಕದ ಆಹಾರ ಸೇವಿಸಿದಲ್ಲಿ ಯಾವುದೇ ಅಧಿಕ ಶಕ್ತಿ, ಉತ್ಸಾಹ ಕೊಡುವ ಪೇಯಗಳಾಗಲಿ ಟಾನಿಕ್‌ಗಳಾಗಲಿ ಅಗತ್ಯವಿಲ್ಲ. ಇದಲ್ಲದೆ, ಮಗು ಬೆಳೆಯಲು ಅದಕ್ಕೆ ಎಲ್ಲರೂ ತಿನ್ನುವ ಆಹಾರವನ್ನೇ ಕೊಟ್ಟರೆ ಸಾಕು. ಸಾಮಾನ್ಯವಾಗಿ ಬರುವ ಶೀತ, ಜ್ವರ ಇತ್ಯಾದಿ ವೈರಸ್‌ನಿಂದ ಉಂಟಾಗುವ ರೋಗಗಳು. ರೋಗ ಅವಧಿ ಮುಗಿದ ಮೇಲೆ ತನ್ನಷ್ಟಕ್ಕೆ ನಿಲ್ಲುತ್ತದೆ. ತೊಂದರೆಗಳಿದ್ದಲ್ಲಿ ಸರಿಯಾದ ತರಬೇತಿ, ವಿದ್ಯಾರ್ಹತೆ ಇರುವ ವೈದ್ಯರಿಂದ ಚಿಕಿತ್ಸೆ ಮಾಡಿಕೊಳ್ಳುವುದು ಉತ್ತಮ. ಈ ಬಗ್ಗೆ ಹೆಚ್ಚಿನ ವಿವರಗಳು ಮುಂದಿನ ಅಧ್ಯಾಯದಲ್ಲಿವೆ.







# ವೈದ್ಯಕೀಯ ಸೇವೆಗಳ ಬಳಕೆದಾರರೇ ಎಚ್ಚೆತ್ತುಕೊಳ್ಳಿ

ಅನಾರೋಗ್ಯ ಬಂದಾಗ ನಾವು ವೈದ್ಯಕೀಯ ಸೇವೆಗಳನ್ನು ಉಪಯೋಗಿಸಿಕೊಳ್ಳಬೇಕಾಗುವುದು. ಈ ಸಂದರ್ಭದಲ್ಲಿ ನಾವು ನಮ್ಮ ಹಕ್ಕುಗಳನ್ನು ತಿಳಿದುಕೊಳ್ಳುವುದು ಅಗತ್ಯ.

## ವೈದ್ಯಕೀಯ ಸೇವೆಗಳ ಬಳಕೆದಾರರ ಹಕ್ಕುಗಳು

1. ವೈದ್ಯರ ವಿದ್ಯಾರ್ಹತೆಯನ್ನು ತಿಳಿದುಕೊಳ್ಳುವ ಹಕ್ಕು.

   ಕೆಲವೊಮ್ಮೆ ಅಳಲೇಕಾಯಿ ಪಂಡಿತರು ತಮ್ಮ ಹೆಸರಿನ ಮುಂದೆ ಡಾ. ಎಂದು ಸೇರಿಸಿಕೊಂಡು ವೈದ್ಯಕೀಯ ಚಿಕಿತ್ಸೆಕೊಡುತ್ತಾರೆ. ಇವರಿಗೆ ಸರಿಯಾದ ತಿಳುವಳಿಕೆಯೇ ಇರುವುದಿಲ್ಲ ಮಾತ್ರವಲ್ಲದೆ, ಅಪಾಯಕಾರಿ ಔಷಧಗಳನ್ನು ಬೇಕಾಬಿಟ್ಟಿಯಾಗಿ ಉಪಯೋಗಿಸುತ್ತಾರೆ. ತತ್ಕಾರಣ, ವೈದ್ಯರ ಸೇವೆ ಉಪಯೋಗ ಮಾಡಿಕೊಳ್ಳುವವರು ಈ ವಿಷಯ ತಿಳಿದುಕೊಳ್ಳುವುದು ಅಗತ್ಯ. ತಜ್ಞರೆಂದು ಕರೆಸಿಕೊಳ್ಳುವವರಿಗೆ ಸಂಬಂಧಪಟ್ಟ ವಿಷಯದಲ್ಲಿ ಸ್ನಾತಕೋತ್ತರ ಪದವಿಯೂ ಡಿಪ್ಲೊಮಾ ಇರಬೇಕು.

2. ಚಿಕಿತ್ಸೆಯ ಬಗ್ಗೆ ವಿವರಗಳನ್ನು ತಿಳಿದುಕೊಳ್ಳುವ ಹಕ್ಕು.

   ವೈದ್ಯರು ಕೊಟ್ಟ ಔಷಧಗಳ ಬಗ್ಗೆ ವಿವರಗಳು, ಸೇವಿಸುವ ವಿಧಾನ, ಅಡ್ಡ ಪರಿಣಾಮಗಳು ಇತ್ಯಾದಿಗಳ ಬಗ್ಗೆ ತಿಳಿದುಕೊಳ್ಳುವ ಹಕ್ಕು ಬಳಕೆದಾರರಿಗಿದೆ.

3. ಶಸ್ತ್ರಚಿಕಿತ್ಸೆಯನ್ನು ಬಳಕೆದಾರರ ಬರಹಮೂಲಕ ಅನುಮತಿ ಪಡೆಯದೆ ಮಾಡುವಂತಿಲ್ಲ.

   ಶಸ್ತ್ರ ಚಿಕಿತ್ಸೆಗೆ ಒಳಗಾಗಬೇಕಾದಾಗ ಬಳಕೆದಾರರಿಂದ ಬರಹಮೂಲಕ ಅನುಮತಿಯನ್ನು ಪಡೆದು ಮಾಡಬೇಕು. ಈ ಅನುಮತಿಯು ನಿರ್ದಿಷ್ಟ ಶಸ್ತ್ರಚಿಕಿತ್ಸೆಗೆ ಮಾತ್ರ ಅನ್ವಯವಾಗುವುದು. ಉದಾಹರಣೆಗೆ ಎಪೆಂಡಿಕ್ಸ್ ಶಸ್ತ್ರಚಿಕಿತ್ಸೆಗೆ ಅನುಮತಿ ಪಡೆದ ವೈದ್ಯನು ಹೊಟ್ಟೆಗೆ ಗಾಯಹಾಕಿದ ಮೇಲೆ ಮೂತ್ರಜನಕಾಂಗದ ಶಸ್ತ್ರ ಚಿಕಿತ್ಸೆ ಮಾಡುವಂತಿಲ್ಲ.







4. ತಜ್ಞವೈದ್ಯರ ಸಲಹೆ ಪಡೆಯುವ ಹಕ್ಕು

ಸಾಮಾನ್ಯ ವೈದ್ಯರ ಚಿಕಿತ್ಸೆ ಪಡೆಯುವ ರೋಗಿಗೆ ತಜ್ಞವೈದ್ಯರ ಅಭಿಪ್ರಾಯ ಬೇಕೆಂದು ಕಂಡುಬಂದಲ್ಲಿ ಅವರು ತಮ್ಮನ್ನು ನೋಡಿಕೊಳ್ಳುವ ವೈದ್ಯರಿಗೆ ಸೂಚನೆಕೊಟ್ಟು, ತಜ್ಞವೈದ್ಯರಲ್ಲಿ ಹೋಗಲು ಅನುಮತಿ ಪಡೆಯಬಹುದು.

5. ಮತ್ತೊಬ್ಬರ ಅಭಿಪ್ರಾಯ ಪಡೆಯುವ ಹಕ್ಕು

ಕೆಲವೊಮ್ಮೆ ಪರಿಸ್ಥಿತಿಯು ಕಷ್ಟಕರವಾಗಿರುವಾಗ ರೋಗಿಗೆ ಮತ್ತೊಬ್ಬ ತಜ್ಞರ ಅಭಿಪ್ರಾಯ ಪಡೆಯುವ ಅಗತ್ಯ ಕಂಡುಬರಬಹುದು. ಹೀಗಾದಲ್ಲಿ, ಅವರಿಗೆ ತಮ್ಮ ಚಿಕಿತ್ಸೆ ನಡೆಸುವ ವೈದ್ಯರನ್ನು ಕೇಳಿಕೊಂಡು, ಅವರದ್ದೇ ಪರಿಣತಿಯ ಮತ್ತೊಬ್ಬ ತಜ್ಞರನ್ನು ಕರೆಸಿಕೊಳ್ಳಬಹುದು.

6. ವೈದ್ಯರನ್ನು ಬದಲಾಯಿಸುವ, ಚಿಕಿತ್ಸಾಕ್ರಮವನ್ನು ತಿರಸ್ಕರಿಸುವ ಹಕ್ಕು.

ಚಿಕಿತ್ಸೆ ಪಡೆಯುತ್ತಿರುವವರಿಗೆ ತಮ್ಮ ವೈದ್ಯರು ಬೇಡವೆಂದು ಕಂಡುಬಂದಲ್ಲಿ, ಯಾ ಚಿಕಿತ್ಸಾಕ್ರಮದ ಕೆಲವು ಅಂಶಗಳು ಬೇಡವೆಂದು ಕಂಡುಬಂದಲ್ಲಿ ಅವುಗಳನ್ನು ನಿರಾಕರಿಸುವ ಹಕ್ಕಿದೆ. ಆದರೆ, ಇವುಗಳಿಂದ ಏನಾದರೂ ತೊಂದರೆಗಳುಂಟಾದಲ್ಲಿ ವೈದ್ಯರನ್ನು ಹೊಣೆಗಾರರನ್ನಾಗಿ ಮಾಡುವಂತಿಲ್ಲ.

7. ಚಿಕಿತ್ಸೆಯ ಖರ್ಚಿನ ಬಗ್ಗೆ ತಿಳಿಯುವ ಹಕ್ಕು : ಮಿತಿಗಳೊಳಗೆ ಚಿಕಿತ್ಸೆಗೆ ಎಷ್ಟು ಖರ್ಚಾಗಬಹುದೆಂದು ಮಾಹಿತಿ ಪಡೆಯುವ ಹಕ್ಕು ಬಳಕೆದಾರರಿಗೆ ಇದೆ. ಈ ಹಕ್ಕನ್ನು ಉಪಯೋಗಿಸಿದ ಬಳಕೆದಾರ ತನ್ನ ಚಿಕಿತ್ಸೆಗೆ ಎಷ್ಟು ಖರ್ಚಾಗುವುದೆಂಬ ಅಂದಾಜು ಪಡೆಯಬಹುದು. ಆದರೆ, ಕೆಲವೊಮ್ಮೆ ಅನಿರೀಕ್ಷಿತ ಖರ್ಚು ಹೆಚ್ಚುವ ಸಂದರ್ಭಗಳಿವೆ.

8. ಗೋಪ್ಯತೆ ಕಾಯ್ದುಕೊಳ್ಳುವ ಹಕ್ಕು : ರೋಗಿ ವೈದ್ಯನಿಗೆ ತಿಳಿಸಿದ ವಿಷಯಗಳು ಗುಪ್ತವಾಗಿಡಬೇಕು. ಸಂಬಂಧಪಟ್ಟ ನ್ಯಾಯಾಲಯದಲ್ಲಿ ಮಾತ್ರ ಈ ಮಾಹಿತಿಯನ್ನು ಕೊಡಬಹುದು. ಆದರೆ, ಸಾರ್ವಜನಿಕ ಹಿತಾಸಕ್ತಿಯಲ್ಲಿ ಕೆಲವು ರೋಗಿಗಳ ಬಗ್ಗೆ ಸರಕಾರಿ ಇಲಾಖೆಗಳಿಗೆ ತಿಳುವಳಿಕೆ ಕೊಡುವುದು ಕಡ್ಡಾಯವಾಗಿದೆ.





## ನಕಲಿ ವೈದ್ಯರು

ಔಷಧಶಾಸ್ತ್ರದ ಬೆಳವಣಿಗೆಯಾದಂತೆ ಹೊಸ – ಹೊಸರೀತಿಯ ಪರಿಣಾಮಕಾರಿ ಔಷಧಗಳು ಹುಟ್ಟಿಕೊಳ್ಳುತ್ತಿರುತ್ತವೆ. ಅಂತೆಯೇ, ಇವುಗಳು ಸಾಮಾನ್ಯವಾಗಿ



ಲಭ್ಯವಿರುವಾಗ ಅಡ್ಡ ಪರಿಣಾಮಗಳ ಬಗ್ಗೆ ಲೆಕ್ಕಿಸದೆ ಅವುಗಳನ್ನು ಉಪಯೋಗಮಾಡುವ ನಕಲಿ ವೈದ್ಯರ ಹಾವಳಿಯೂ ಹೆಚ್ಚುತ್ತಿದೆ.

ಇಂತಹ ನಕಲಿ ವೈದ್ಯರನ್ನು ಗುರುತಿಸುವುದು ಹೇಗೆಂದು ತಿಳಿದುಕೊಳ್ಳುವುದು ಅಗತ್ಯ.

1. **ವಿದ್ಯಾರ್ಹತೆ :** ಸಾಮಾನ್ಯವಾಗಿ ಆಧುನಿಕ ವೈದ್ಯ ಪದ್ಧತಿಯಲ್ಲಿ ಡಿಗ್ರಿ ಪಡೆದವರಲ್ಲಿ ಈಗಿನ ಕನಿಷ್ಠ ವಿದ್ಯಾರ್ಹತೆ ಎಂ.ಬಿ.ಬಿ.ಎಸ್. ಅದೇ ಆಯುರ್ವೇದದಲ್ಲಿ ಬಿ.ಎ.ಎಂ.ಎಸ್., ಹೊಮಿಯೋಪತಿಯಲ್ಲಿ ಬಿ.ಎಸ್.ಎಂ.ಎಸ್. ಹಿಂದಿನ ಕಾಲದವರಲ್ಲಿ ಕೆಲವರು ಲೈಸೆನ್ಸಿಯೇಟ್ ವಿದ್ಯಾರ್ಹತೆ ಪಡೆದಿದ್ದಾರೆ. ಆದರೆ, ಆರ್.ಎಂ.ಪಿ. ಎಂಬುದು ಆಯುರ್ವೇದ ಪಂಡಿತರಲ್ಲಿ ವಂಶಪಾರಂಪರ್ಯವಾಗಿ ಕಲಿತು ಬಂದವರಿಗೆ ಸಿಗುವ ಪರವಾನಿಗೆ. ಇವರಿಗೆ ಆಯುರ್ವೇದ ಔಷಧಗಳನ್ನು ಮಾತ್ರ ಕೊಡುವ ಅರ್ಹತೆಯಿದೆ. ಎಲೆಕ್ಟ್ರೊಹೋಮಿಯೋಪತಿ, ಎಕ್ಯುಪ್ರೆಶ್ಶರ್, ಆಲ್ಟರ್‌ನೇಟಿವ್ ಮೆಡಿಸಿನ್ ಇತ್ಯಾದಿಗಳು ಸುಳ್ಳು ಡಿಗ್ರಿಗಳು. ಇದಲ್ಲದೆ, ಕೆಲವು ವೈದ್ಯರು ತಾವು ವಿದೇಶಿ ವಿದ್ಯಾರ್ಹತೆ ಪಡೆದವರೆಂದು ತೋರಿಸಲು ಎಂ.ಆರ್.ಎಸ್.ಎಲ್ (ಲಂಡನ್), ಎಫ್.ಆರ್.ಎಸ್.ಎಲ್ (ಲಂಡನ್) ಮುಂತಾದ ಅಕ್ಷರಗಳನ್ನು ಜೋಡಿಸಿಕೊಳ್ಳುವುದುಂಟು. ಇವೆಲ್ಲವೂ ವಿದ್ಯಾರ್ಹತೆಗಳೇ ಅಲ್ಲ.

2. **ಜಾಹೀರಾತು :** ಸರಿಯಾದ ಕ್ರಮಗಳನ್ನು ಅನುಸರಿಸುವ ವೈದ್ಯರು ಜಾಹೀರಾತು ಮಾಡುವಂತಿಲ್ಲ. ತತ್ಕಾರಣ, ಜಾಹೀರಾತುಗಳನ್ನು ಕೊಡುವ "ಡಾ."ಗಳು ಅಳಲೇಕಾಯಿ ಪಂಡಿತರೆಂದು ತಿಳಿದುಕೊಳ್ಳಬಹುದು. ವೈದ್ಯಕೀಯ ನೀತಿ ಸಂಹಿತೆಯ ಪ್ರಕಾರ ವೈದ್ಯರು ತಮ್ಮ ಕ್ಲಿನಿಕ್ ತೆರೆಯುವಾಗ, ಊರು ಬಿಟ್ಟು ಹೋಗುವಾಗ, ಕ್ಲಿನಿಕ್‌ನ ಸ್ಥಳ ಬದಲಾವಣೆ ಮಾಡುವಾಗ, ತಜ್ಞತೆಯ ಕ್ಷೇತ್ರ ಬದಲಾಯಿಸುವಾಗ ಮಾತ್ರ ಜಾಹೀರಾತುಗಳನ್ನು ಕೊಡಬಹುದು.

3. **ಗುಣಪಡಿಸುವ ರೋಗಗಳು :** ಢೋಂಗಿ ವೈದ್ಯರು ಗುಣಪಡಿಸುತ್ತೇವೆಂದು ಹೇಳಿಕೊಳ್ಳುವ ರೋಗಗಳು ಸಾಮಾನ್ಯವಾಗಿ ಗುಣವಾಗದವು ಯಾ ರೋಗಿಗಳು ವೈದ್ಯರಲ್ಲಿ ಹೇಳಲು ನಾಚಿಕೆಪಟ್ಟುಕೊಳ್ಳುವವು. ಅಸ್ತಮಾ, ಕ್ಯಾನ್ಸರ್, ಲೈಂಗಿಕ ರೋಗಗಳು, ನಪುಂಸಕತೆ, ಗುಹ್ಯರೋಗಗಳು, ಮೂಲವ್ಯಾಧಿ ಇತ್ಯಾದಿ.

4. **ರೋಗಿಗಳ ಧೃಡೀಕರಣ ಪತ್ರಗಳ ಉಪಯೋಗ :** ಕೆಲವು "ಡಾ."ಗಳು ರೋಗಿಗಳ ಪ್ರಶಂಸಾ ಪತ್ರಗಳನ್ನು ಉಪಯೋಗಿಸಿ ಜಾಹೀರಾತು ಮಾಡುತ್ತಾರೆ. ಇಂತಿಹವರಿಂದ ಕ್ಯಾನ್ಸರ್ ರೋಗದ ಗುಣವಾಯಿತು, ಇಂತಹವನಿಂದ ಡಯಾಬಿಟಿಸ್







ರೋಗಗುಣವಾಯಿತು ಇತ್ಯಾದಿ ಜಾಹೀರಾತುಗಳನ್ನು ಕಾಣಬಹುದು. ಇವುಗಳನ್ನು ಕೊಡುವ ವೈದ್ಯರು ಢೋಂಗಿ ವೈದ್ಯರೆಂಬುದರಲ್ಲಿ ಸಂಶಯವಿಲ್ಲ.

5. **ಗುಣವಾಗದಿದ್ದರೆ ಹಣ ವಾಪಸ್** : ಯಾವ ತಜ್ಞವೈದ್ಯನೂ ಇಂತಹ ಕೊಡುಗೆಯನ್ನು ಮಾಡುವುದಿಲ್ಲ. ಆತ, ತನ್ನ ಶಕ್ತಿಮೀರಿ ಪ್ರಯತ್ನಿಸುತ್ತೇನೆಂಬ ಆಶ್ವಾಸನೆಯನ್ನು ಕೊಡುತ್ತಾನೆಯೇ ಹೊರತು, ಗುಣವಾಗದಿದ್ದರೆ ಹಣ ಹಿಂದಿರುಗಿಸುವ ಶರ್ತಕ್ಕೆ ಒಪ್ಪುವುದಿಲ್ಲ. ಇಂತಹ ಕೊಡುಗೆಯನ್ನು ಮಾಡುವಾತ ಖಂಡಿತವಾಗಿಯೂ ನಕಲಿ ವೈದ್ಯನೇ ಎಂದು ತಿಳಿದುಕೊಳ್ಳಬಹುದು.

6. **ರಹಸ್ಯೌಷಧಿಗಳು ಮತ್ತು ಚಿಕಿತ್ಸಾಕ್ರಮಗಳು** : ಕೆಲವೊಮ್ಮೆ ಈ "ಡಾ"ಗಳು ತಮ್ಮಲ್ಲಿ ವಿಶಿಷ್ಟ ಔಷಧಗಳು ಹಾಗೂ / ಯಾ ರಹಸ್ಯವಾಗಿಡಬೇಕಾದ ಚಿಕಿತ್ಸಾಕ್ರಮಗಳು ಎಂದು ಘೋಷಿಸುತ್ತಾರೆ. ಇವುಗಳನ್ನು ಯಾರಿಗಾದರೂ ತಿಳಿಸಿದಲ್ಲಿ ಅದರ ಶಕ್ತಿ ಹೋಗುವುದು ಮುಂತಾದ ಸಬೂಬುಗಳನ್ನು ಕೊಡಲಾಗುತ್ತದೆ. ಉದಾಹರಣೆಗೆ ಹೈದ್ರಾಬಾದ್‌ನ ಮೀನಿನಲ್ಲಿ ಕೊಡುವ ಅಸ್ತಮಾ ಔಷಧ. ಇಂತಹ ಔಷಧ, ಚಿಕಿತ್ಸಾಕ್ರಮಗಳನ್ನು ನಂಬಬಾರದು!

## ಲೈಂಗಿಕ ರೋಗಕ್ಕೆ ಚಿಕಿತ್ಸೆ :

ಹದಿನೆಂಟು ವರ್ಷದ ಯುವಕನೊಬ್ಬ ಸ್ವಪ್ನಸ್ಖಲನದಿಂದಾಗಿ ಮನೋವ್ಯಾಕುಲತೆಗೆ ಒಳಗಾಗಿದ್ದ. ಪತ್ರಿಕಾ ಜಾಹೀರಾತು ನೋಡಿ, "ಖ್ಯಾತ" ಅನುವಂಶಿಕ "ವೈದ್ಯ"ರೊಬ್ಬರ ಚಿಕಿತ್ಸೆ ಪಡೆದ. ಆದರೂ ಇದು ನಿಲ್ಲಲಿಲ್ಲ. ಕೊನೆಗೆ ಈತನ ಪರಿಸ್ಥಿತಿ ಎಷ್ಟು ಚಿಂತಾಜನಕವಾಯಿತೆಂದರೆ ಆತನೊಂದು ದಿನ ಆತ್ಮಹತ್ಯೆಗೆ ಪ್ರಯತ್ನಿಸಿದ. ಕೊನೆಗೆ ನಮ್ಮ ಮಿತ್ರ ಮನೋರೋಗ ತಜ್ಞರ ಚಿಕಿತ್ಸೆಗೊಳಗಾದ : ಇವರು ಈ "ಲೈಂಗಿಕ" ತಜ್ಞ ಕೊಟ್ಟ ಔಷಧವನ್ನು ಪರೀಕ್ಷೆಗೊಳಪಡಿಸಿದಾಗ ಅವು ಬರೇ ಕಬ್ಬಿಣದ ಸತ್ವದ ಮಾತ್ರೆಗಳಾಗಿದ್ದುವು! ಕೆಲವೇ ಪೈಸೆಗಳಷ್ಟು ಬೆಲೆ ಇದ್ದ ಇವುಗಳಿಗೆ ಈತ ಇನ್ನೂರು ರೂಪಾಯಿಗಳನ್ನು ಪಡೆದಿದ್ದ.

ಈ ವ್ಯವಹಾರವು ಸ್ಪಷ್ಟವಾದ ಮೋಸವಾಗಿದ್ದರೂ, ಸಂಬಂಧಪಟ್ಟವರು ದೂರು ಕೊಡಲು ಸಿದ್ಧರಿಲ್ಲದ ಕಾರಣ ಯಾವುದೇ ಕ್ರಮಗಳನ್ನೂ ಕೈಗೊಳ್ಳಲಾಗಲಿಲ್ಲ. ಮನೋರೋಗ ತಜ್ಞರು ಈತನಿಗೆ ಸ್ವಪ್ನಸ್ಖಲನವು ಹಾನಿಕಾರಕವಲ್ಲವೆಂದು ಮನವರಿಕೆ ಮಾಡಿಕೊಟ್ಟರು.





## ಒಳಗೆ ಮುರಿದ ಸೂಜಿ, ಕಂಗಾಲಾದ ಹೆತ್ತವರು

ಮಗುವೊಂದಕ್ಕೆ ವೈದ್ಯರು ಇಂಜಕ್ಷನ್ ಕೊಡುವಾಗ ಅದು ಒದ್ದಾಡಿತು. ಆಗ ಡಾಕ್ಟರ್ ಹಿಡಿದ ಸಿರಿಂಜ್ ಕೈ ತಪ್ಪಿ, ಸೂಜಿ ಮುರಿಯಿತು. ಅಳುತ್ತಿರುವ ಮಗುವನ್ನು



ಕೂಡಲೇ ತಂದು, ಮಂಗಳೂರಿನ ನರ್ಸಿಂಗ್ ಹೋಂ ಒಂದರಲ್ಲಿ ಸೇರಿಸಿದರು. ಬಳಿಕ, ಕ್ಷಕಿರಣದ ಫೋಟೋ ತೆಗೆದು, ಮಗುವನ್ನು ಶಸ್ತ್ರಚಿಕಿತ್ಸಾ ಕೊಠಡಿಗೆ ಕೊಂಡುಹೋಗಲಾಯಿತು. ತಜ್ಞ ವೈದ್ಯರನ್ನು ಕರೆಸಿ, ಅವರು ಶಸ್ತ್ರಚಿಕಿತ್ಸೆ ಮಾಡಿ, ಸೂಜಿಯನ್ನು ತೆಗೆಯಲಾಗಿದೆಯೆಂದರು. ಅದರೂ, ಮಗು ಅಳುತ್ತಲೇ ಇತ್ತು. ಮಗುವಿನ ತಾಯಿಗೆ ಮಗುವಿನ ಕಷ್ಟವನ್ನು ನೋಡುವಾಗ ಸಂಶಯಬಂತು. ಏಕೆಂದರೆ, ಮಗುವಿಗೆ ಇಂಜೆಕ್ಷನ್ ಕೊಟ್ಟ ವಿರುದ್ಧಭಾಗದಲ್ಲಿ ಬ್ಯಾಂಡೇಜು ಮಾಡಲಾಗಿತ್ತು. ಅವರು ಪಟ್ಟು ಹಿಡಿದಾಗ, ಮತ್ತೊಮ್ಮೆ ಕ್ಷಕಿರಣವನ್ನು ಹಾಯಿಸಿ, ಫೋಟೋ ತೆಗೆಯಲಾಯಿತು.

ನೋಡಿದಾಗ ಸೂಜಿ ಅಲ್ಲೇ ಇತ್ತು! ಮೊದಲಬಾರಿ ತೆಗೆದಾಗ ಅದನ್ನು ತೆಗೆಯುವ ತಂತ್ರಜ್ಞನ ಕೈತಪ್ಪಿನಿಂದಾಗಿ ಎಡ–ಬಲ ಅದಲುಬದಲಾಗಿದ್ದುವು!

ಶಸ್ತ್ರಚಿಕಿತ್ಸಕರನ್ನು ಮತ್ತೆ ಕರೆಸಿ, ಅವರು ಮತ್ತೊಮ್ಮೆ ಆಪರೇಶನ್ ಮಾಡಿ, ಸೂಜಿಯನ್ನು ಹೊರತೆಗೆದರು. ತಂತ್ರಜ್ಞನೇನೋ ತಪ್ಪು ಮಾಡಿದ. ಎಂದುಕೊಳ್ಳಿ. ಮೊದಲನೆಯ ಬಾರಿ ಶಸ್ತ್ರಚಿಕಿತ್ಸೆ ಮಾಡಿದ ವೈದ್ಯರು, ಎಲ್ಲವೂ ಸರಿಯಾಗುವುದು, ನಾನು ಸೂಜಿಯನ್ನು ತೆಗೆದಿದ್ದೇನೆ ಎಂದು ಹೇಳಿದ್ದೇಕೆ?

## ತುಂಡಾದ ಸ್ಟೀಲ್ ಪ್ಲೇಟ್, ಮೋಸಹೋದ ಬಳಕೆದಾರರು

ಮಂಗಳೂರಿನ ಬಳಿ ಹಳ್ಳಿಯೊಂದರ ಬಳಕೆದಾರರ ವೇದಿಕೆಯವರು ನಮ್ಮ ಸಲಹೆ ಕೇಳಲು ಬಂದಿದ್ದರು. ಅವರ ಕೈಯಲ್ಲೊಂದು ತುಂಡಾದ ಸರ್ಜಿಕಲ್ ಸ್ಟೀಲ್‌ನ ಪಟ್ಟಿಯಿತ್ತು. ವಿಷಯವೇನೆಂದು ಕೇಳಿದಾಗ ತಿಳಿಸಿದರು.

ಅವರ ಸದಸ್ಯರೊಬ್ಬರಿಗೆ ಅಪಘಾತವಾಗಿ ಕಾಲಿನ ಮೂಳೆ ತುಂಡಾಗಿತ್ತಂತೆ. ಆಗ, ಮಂಗಳೂರಿನ ಹೆಸರಾಂತ ನರ್ಸಿಂಗ್ ಹೋಂ ಒಂದರಲ್ಲಿ ಖ್ಯಾತ ಮೂಳೆ ತಜ್ಞರೊಬ್ಬರವರಿಂದ ಚಿಕಿತ್ಸೆ ಪಡೆದಿದ್ದರು. ಅವರು, ಬಳಕೆದಾರರಿಗೆ ತಾವು ವಿದೇಶದಿಂದ ತಂದ ಸ್ಟೀಲ್ ಪ್ಲೇಟ್ ಒಂದನ್ನು ಮೊಳೆಜೋಡಿಸಲು ಉಪಯೋಗಿಸಲಾಗುವುದೆಂದು ಹೇಳಿ ಹೆಚ್ಚಿನ ಹಣವನ್ನೂ ವಸೂಲಿ ಮಾಡಿದ್ದರು. ಆದರೆ, ಆಸ್ಪತ್ರೆಯಿಂದ ಬಿಡುಗಡೆಯಾಗಿ ಮನೆಗೆ ಹೋದವರಿಗೆ ಕೆಲವು ತಿಂಗಳುಗಳ ಬಳಿಕ ಮತ್ತೆ ನೋವು ಆರಂಭವಾಯಿತು! ಇನ್ನೊಬ್ಬ ಮೂಳೆ ತಜ್ಞರಲ್ಲಿ ತೋರಿಸಿದಾಗ ಅವರು ಎಕ್ಸ್‌ರೇ ಮೂಲಕ ಆ "ವಿದೇಶಿ" ಸ್ಟೀಲ್ ಪ್ಲೇಟು ತುಂಡಾಗಿದೆಯೆಂದು ತಿಳಿಸಿದರು. ಬಳಕೆದಾರರ ಮೇಲೆ ಮತ್ತೊಮ್ಮೆ ಶಸ್ತ್ರಚಿಕಿತ್ಸೆ ನಡೆಯಿತು. ಒಳಗಿದ್ದ ವಿದೇಶಿ ಪ್ಲೇಟು, ಭಾರತದಲ್ಲಿ ಲಭ್ಯವಿರುವ ಅಂತಹ ವಸ್ತುಗಳಲ್ಲಿ ಅತ್ಯಂತ ಅಗ್ಗದ್ದೆಂದು ಸಾಬೀತಾಯಿತು. ಈ ವೈದ್ಯರನ್ನು ನಂಬಿದ ಬಳಕೆದಾರರಿಗೆ ಎಷ್ಟು ನೋವು, ತೊಂದರೆಗಳೆಲ್ಲವೂ ಒಂದೇ ಕಾಲದಲ್ಲಿ ಪೀಡಿಸಿದುವು.







ಈ ಬಗ್ಗೆ ಬಳಕೆದಾರರ ನ್ಯಾಯಾಲಯದಲ್ಲಿ ದಾವೆ ಹೂಡಲು ಸಹಕಾರವನ್ನು ಯಾಚಿಸಿದವರು ಮತ್ತೆ ಬರಲೇ ಇಲ್ಲ. ಪ್ರಾಯಶಃ ಅವರಿಗೂ, ಮೋಸ ಮಾಡಿದ ವೈದ್ಯರಿಗೂ ಯಾವುದೋ ಒಪ್ಪಂದವಾಗಿರಬೇಕು!

ಈ ಅಧ್ಯಾಯದಲ್ಲಿ ಕೊಟ್ಟಿರುವ ಉದಾಹರಣೆಗಳ ಮೂಲಕ ಬಳಕೆದಾರರು ಜಾಗ್ರತರಾಗುತ್ತಾರೆಂದು ನಂಬುತ್ತೇನೆ. ಎಲ್ಲಾ ವೈದ್ಯರೂ ಮೋಸಗಾರರೆಂಬ ಭಾವನೆಯನ್ನು ಹೊಂದಬೇಕಾಗಿಲ್ಲ. ಹೆಚ್ಚಿನವರು ಪ್ರಾಮಾಣಿಕರಾಗಿರುತ್ತಾರೆ. ಆದರೆ, ನಕಲಿ ವೈದ್ಯರು ತಮ್ಮ ವಿಧ-ವಿಧದ ಪ್ರಚಾರದ ಮೂಲಕವೇ ಬಳಕೆದಾರರನ್ನು ಬಲೆಗೆ ಬೀಸಿ, ಮೋಸಗೊಳಿಸುವುದೆಂಬುದನ್ನು ನೆನಪಿಡಬೇಕು.

ಈ ವೈದ್ಯಕೀಯ ಸೇವೆಗಳ ಬಳಕೆದಾರರ ಹಕ್ಕುಗಳು ವೈದ್ಯರಿಗೆ ಮಾತ್ರವಲ್ಲದೆ, ದಂತವೈದ್ಯರು, ಎಕ್ಸ್‌ರೇ ಘಟಕಗಳು, ಲ್ಯಾಬೊರೆಟರಿಗಳು, ನರ್ಸಿಂಗ್ ಹೋಂ, ಆಸ್ಪತ್ರೆಗಳು ಎಲ್ಲವಕ್ಕೂ ಅನ್ವಯವಾಗುತ್ತವೆ.










# ಆಹಾರ ಕಲಬೆರಕೆ – ವ್ಯಾಪಕವಾಗಿರುವ ಪಿಡುಗು

ಆಹಾರ ಕಲಬೆರಕೆ ನಿಯಂತ್ರಣಕ್ಕೆ ಭಾರತದಲ್ಲಿ ಜಗತ್ತಿನ ಅತ್ಯಂತ ಪ್ರಗತಿಶೀಲವೆಂದು ಹೇಳಬಹುದಾದ ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆಯು 1954ರಲ್ಲಿ ರಚಿತವಾಗಿದೆ. ಇದರಡಿಯಲ್ಲಿ ಆಹಾರ ಕಲಬೆರಕೆಯು ಕ್ರಿಮಿನಲ್ ಅಪರಾಧವಾಗಿದ್ದು, ಜೈಲುವಾಸ, ಜುಲ್ಮಾನೆ ಇತ್ಯಾದಿಗಳನ್ನು ವಿಧಿಸಬಹುದು. ಪರಿಸ್ಥಿತಿ ಹೀಗಿದ್ದರೂ, ಆಹಾರ ಕಲಬೆರಕೆ ಹೆಚ್ಚುತ್ತಲೇ ಇದೆ. ಹೊಸ – ಹೊಸ ವಿಧಾನಗಳಿಂದ ಕಲಬೆರಕೆ ಮಾಡಲು ಕಲಿಯುವ ಮಾರಾಟಗಾರ, ಉತ್ಪಾದಕರು ಬಳಕೆದಾರರನ್ನು ಶೋಷಿಸುತ್ತಿದ್ದಾರೆ. ಕಲಬೆರಕೆಯಿಲ್ಲದ ಆಹಾರ ಪದಾರ್ಥಗಳನ್ನು ನ್ಯಾಯಯುತವಾದ ಬೆಲೆಯಲ್ಲಿ ಪಡೆಯುವುದು ಬಳಕೆದಾರರ ಹಕ್ಕಾದರೂ, ಇದರ ಉಲ್ಲಂಘನೆಗಳು ನಡೆಯುತ್ತಲಿವೆ.

ಆಹಾರ ಕಲಬೆರಕೆ ಪತ್ತೆಹಚ್ಚುವ ಸುಲಭವಾದ ವಿಧಾನಗಳನ್ನು ಈ ಪುಸ್ತಕದಲ್ಲಿ ಕೊಡಲಾಗಿದೆ. ಇವುಗಳು ಕಾನೂನಿನ ಪ್ರಕಾರ ಕಲಬೆರಕೆಯನ್ನು ಸಾಬೀತುಪಡಿಸುವವಲ್ಲವಾದರೂ ಬಳಕೆದಾರರಿಗೆ ಮಾಹಿತಿ ಕೊಡುವುದರಲ್ಲಿ ಉಪಯುಕ್ತವಾಗಿದೆ.

## ಹಾಲಿನ ಕಲಬೆರಕೆ

ಹಾಲಿನಲ್ಲಿ ವಿವಿಧ ರೀತಿಯವಿವೆ. ಇವುಗಳಲ್ಲಿ ಪ್ರತಿಯೊಂದಕ್ಕೂ ಕೊಬ್ಬು ಹಾಗೂ ಕೊಬ್ಬಲ್ಲದ ಘನಾಂಶಗಳಿಗೆ ಗುಣಮಟ್ಟಗಳನ್ನು ನಿಗದಿಪಡಿಸಲಾಗಿದೆ. ಆದರೂ, ಹಾಲು ಸುಲಭವಾಗಿ ಕಲಬೆರಕೆ ಮಾಡುವ ಆಹಾರ ವಸ್ತು ಆಗಿರುವ ಕಾರಣ, ಹಾಲಿನ ಮಾರಾಟದಲ್ಲಿ ಸಾಕಷ್ಟು ಅಕ್ರಮಗಳು ನಡೆಯುತ್ತವೆ.

ಕೆಲವು ವರ್ಷಗಳ ಹಿಂದೆ ನಮ್ಮ ಟ್ರಸ್ಟ್ ಮಂಗಳೂರಿನಲ್ಲಿ ಲಭ್ಯವಿರುವ ವಿವಿಧ ಹಾಲಿನ ಮಾದರಿಗಳನ್ನು ಖರೀದಿಸಿ, ಪರೀಕ್ಷೆಗೊಳಪಡಿಸಿತು. ಇದರಿಂದ ನಮಗೆ ಕಂಡು ಬಂದ ಮುಖ್ಯವಾದ ವಿಷಯವೇನೆಂದರೆ ಮಂಗಳೂರಿನಲ್ಲಿ ಮಾರಾಟವಾಗುವ ಹಾಲಿನಲ್ಲಿ 80% ಕಲಬೆರಕೆಯಿತ್ತು. ಇದರಲ್ಲಿ, ಮಂಗಳೂರು ಸರಕಾರಿ ಹಾಲಿನ ಡೈರಿಯು ಮಾರಾಟಮಾಡುವ ಹಾಲೂ ಸೇರಿತ್ತು! 3.5 % ಕೊಬ್ಬಿನಂಶವಿರಬೇಕಾದ ಇದರಲ್ಲಿ 2.5 – 2.6 % ನಷ್ಟು ಮಾತ್ರ ಕೊಬ್ಬಿತ್ತು. ಕೆಲವು ಕಡೆಗಳಲ್ಲಂತೂ, ಕೆನೆ







ತೆಗೆದ ಹಾಲಿನ ಹುಡಿ (skimmed milk powder)ಯನ್ನು ನೀರಿನಲ್ಲಿ ಕರಗಿಸಿ ಮಾರಾಟಮಾಡಲಾಗುತಿತ್ತು! ಈ ಬಗ್ಗೆ ನಾವು ಹಲವಾರು ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದೆವು.

ಮಂಗಳೂರಿನ ಹಾಲಿನ ಡೈರಿಯ ಬಗ್ಗೆ ಲೇಖನವನ್ನು ಬರೆದಾಗ ಅಲ್ಲಿಯ ಮುಖ್ಯಸ್ಥರಾಗಿದ್ದ ವ್ಯಕ್ತಿಯೊಬ್ಬರು ರೊಚ್ಚಿಗೆದ್ದರು. ಅಲ್ಲಿ ನಡೆಯುವ ಅವ್ಯವಹಾರಗಳನ್ನು ಲೇಖನದಲ್ಲಿ ಬಯಲಿಗೆಳೆದ ಕಾರಣ ಅವರಿಗೆ ಬಹಳ ಸಿಟ್ಟು ಬಂದಿತ್ತು. ನಮ್ಮ ಬಗ್ಗೆ ಬಹಳ ತೀಕ್ಷ್ಣವಾದ ಶಬ್ದಗಳನ್ನು ಉಪಯೋಗಿಸಿ, ಹೀಗೆಲ್ಲಾ ಮಾಡುವ ಸಂಘಟನೆಯು ಹಿಂಸಾತ್ಮಕ ವಿಧಾನದಿಂದಲೇ ಕೊನೆಗೊಳ್ಳುವುದೆಂದೂ ಬೆದರಿಸಿದರು!

ಬಳಿಕ, ನಾವು ಮಹಾನಗರ ಪಾಲಿಕೆಗೆ ದೂರು ಸಲ್ಲಿಸಿದಾಗ, ಅಲ್ಲಿನ ಹಾಲಿನ ಮಾದರಿಯನ್ನು ಪ್ರಯೋಗಾಲಯಕ್ಕೆ ಕಳುಹಿಸಲಾಯಿತು. ಬಂದ ವರದಿಯ ಪ್ರಕಾರ, ಈ ಹಾಲು ಕಲಬೆರಕೆಯದೆಂದು ಸಾಬೀತಾಗಿತ್ತು! ಇವರ ಮೇಲೆ ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆಯನ್ವಯ ದಾವೆ ಹೂಡಬೇಕೆಂದು ನಾವು ಮಹಾನಗರ ಪಾಲಿಕೆಯವರ ಮೇಲೆ ಒತ್ತಡ ತಂದೆವು. ಆದರೆ, ಆಗಿನ ಜಿಲ್ಲಾಧಿಕಾರಿಯವರು ಮಹಾನಗರಪಾಲಿಕೆ ಆಡಳಿತಗಾರರಾಗಿದ್ದರು ಮತ್ತು ಹಾಲಿನ ಡೈರಿಯ ಮಂಡಳಿಯ ಛೇರ್‌ಮೇನ್ ಆಗಿದ್ದರು! ತತ್ಕಾರಣ, ತಮ್ಮದೇ ಮೇಲ್ವಿಚಾರಣೆಯಲ್ಲಿರುವ ಎರಡು ಸಂಸ್ಥೆಗಳಲ್ಲಿ ಒಂದರ ಮೇಲೊಂದು ದಾವೆ ಹೂಡದಂತೆ ತಡೆಯುವ ಉದ್ದೇಶ ಆತನದಾಗಿತ್ತು! ಒಟ್ಟಿನಲ್ಲಿ ಮಂಗಳೂರು ಹಾಲಿನ ಡೈರಿಯು ಕಲಬೆರಕೆ ಹಾಲನ್ನು ಮಾರಾಟಮಾಡುತ್ತಿದ್ದರೂ ದಾವೆ ಹೂಡಲಾಗಲಿಲ್ಲ! ಪ್ರಜಾಪ್ರಭುತ್ವದಲ್ಲೂ ಕೆಲವು ಹೆಚ್ಚು ಸಮಾನರಿದ್ದಾರೆ!

## ಪಡಿತರ ಅಂಗಡಿಯಲ್ಲಿ ಕಲಬೆರಕೆ

ಒಂದು ದಿನ ನಮ್ಮ ಟ್ರಸ್ಟ್‌ನ ಕಾರ್ಯಕಾರಿ ಸಮಿತಿಯ ಸಭೆ ನಡೆಯುತ್ತಿದ್ದಾಗ, ಬಳಕೆದಾರರೊಬ್ಬರು ಧಾವಿಸಿ ಬಂದರು. ಕೈಯಲ್ಲಿ ಪ್ರಾಣಿಗಳ ಎಲುಬುಗಳಂತಿರುವ ವಸ್ತುಗಳನ್ನು ತಂದಿದ್ದರು. ಇವು ನಮ್ಮ ರೇಷನ್ ಅಂಗಡಿಯ ಅಕ್ಕಿಯಲ್ಲಿದ್ದುವು ಎಂದು ದೂರಿದರು. ನೋಡಿದಾಗ ಆ ವಸ್ತುಗಳು ಅಕ್ಕಿಯ ಕಾಳುಗಳು ಒಂದಕ್ಕೊಂದು ಅಂಟಿಕೊಂಡು ಉಂಡೆ ಆಗಿದ್ದುವು. ಅದರ ವಾಸನೆ ನೋಡಿದಾಗ, ಇದು ಖಂಡಿತವಾಗಿಯೂ ಮನುಷ್ಯ ಸೇವನೆಗೆ ತಕ್ಕದ್ದಲ್ಲದ್ದೆಂಬುದು ಸ್ಪಷ್ಟ.

ಈ ಬಗ್ಗೆ ಬಳಕೆದಾರರು ದೂರು ಸಲ್ಲಿಸಲು ಮುಂದಾದರು. ಆದರೆ, ಅವರದ್ದು ಶರ್ತವೊಂದಿತ್ತು. ಅದೇನೆಂದರೆ, ಆ ಅಂಗಡಿಯವನ ಮೇಲೆ ಯಾವುದೇ ಕ್ರಮ ಕೈಗೊಳ್ಳಬಾರದು; ಅದನ್ನು ಮಾರಾಟ ಮಾಡಿದ ಸರಕಾರಿ ಇಲಾಖೆಯ ಮೇಲೆ ಮಾತ್ರ







ದೂರು ಸಲ್ಲಿಸಬೇಕು. ಇವರು ಅಂಗಡಿ ಮಾಲೀಕನಿಗೆ ಯಾವುದೇ ರೀತಿಯ ತೊಂದರೆಯಾಗುವುದಿಲ್ಲವೆಂಬ ಭರವಸೆ ಕೊಟ್ಟಿದ್ದರಂತೆ! ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆಯ ಪ್ರಕಾರ, ತೆರೆದ ಚೀಲ ಯಾ ಪೊಟ್ಟಣಗಳಿಂದ ಮಾರಾಟವಾಗುವ ವಸ್ತುಗಳಿಗೆ ಮಾರಾಟಗಾರನೇ ಹೊಣೆಯಾಗುತ್ತಾನೆಂದಾಗ ಇವರ ಉತ್ಸಾಹ ಮಾಯ!

ಇಂತಹ ಸಂದರ್ಭಗಳಲ್ಲಿ ಮಾರಾಟಗಾರರು ತಾವು ಕಲಬೆರಕೆಯಾದ ಆಹಾರ ವಸ್ತುವನ್ನು ಯಾರಿಂದ ಖರೀದಿಸಿದ್ದಾರೆಂದು ಸಾಬೀತು ಪಡಿಸಬೇಕು.

## ದಾರಿ ಬದಿಯಲ್ಲಿ ಮಾರಾಟವಾಗುವ ಬೇಳೆ

ಬೆಂಗಳೂರಿನಲ್ಲಿ ಕಾಲುದಾರಿಗಳ ಮೇಲೆ 'ತೊಗರಿಬೇಳೆ'ಯ ಗುಡ್ಡೆ ಹಾಕಿ ಮಾರಾಟವಾಗುತಿತ್ತು. ಮಾರಾಟಗಾರರು ತಾವು ಮಧ್ಯವರ್ತಿಗಳ ಶೋಷಣೆಗೆ ರೋಸಿ ಹೋಗಿ, ಬಳಕೆದಾರರಿಗೆ ನೇರವಾಗಿ ಕಡಿಮೆ ಬೆಲೆಗೆ ಮಾರಾಟಮಾಡುತ್ತೇವೆಂದು ಘೋಷಿಸುತ್ತಿದ್ದರು. ಹಲವಾರು ಮಂದಿ ಆ ಬೇಳೆಯನ್ನು ಖರೀದಿಸಿದರು.

ಆದರೆ, ಸಂಶಯಬಂದ ಬಳಕೆದಾರರೊಬ್ಬರು ಈ 'ತೊಗರಿ ಬೇಳೆ'ಯನ್ನು ಪ್ರಯೋಗಾಲಯದಲ್ಲಿ ಪರೀಕ್ಷೆ ಮಾಡಿಸಿದರು. ಮಾರಾಟಗಾರರ ಸಮಾಜಸೇವಾಸಕ್ತಿಯ ಗುಟ್ಟು ಬಯಲಾಯಿತು. ಈ ಬೇಳೆಯು ಕೇಸರಿಬೇಳೆಯಾಗಿತ್ತು! ಸೇವಿಸಿದಲ್ಲಿ ಕಾಲುಗಳು ವಾತ ಪೀಡಿತವಾಗುವ ಕಾರಣ, ಇದನ್ನು ನಿಷೇಧಿಸಲಾಗಿದೆ.

ತತ್ಕಾರಣ, ಬಳಕೆದಾರರು ಇಂತಹ ಮಾರಾಟಗಳ ಬಗ್ಗೆ ಜಾಗ್ರತೆಯಿಂದಿರುವುದು ಸೂಕ್ತ. ವಾಸ್ತವವಾಗಿ ಸಮಾಜಸೇವೆ ಮಾಡುತ್ತೇವೆಂದು ಹೇಳಿ ಮಾರಾಟಮಾಡುತ್ತಿದ್ದ ಈ ವ್ಯಕ್ತಿಗಳು ಅತಿ ಬುದ್ಧಿವಂತ ಮೋಸಗಾರರಾಗಿದ್ದರು.



## ತಿಳಿಯದೆ ಕಲಬೆರಕೆ !

ಕೆಲವೊಮ್ಮೆ ಕಲಬೆರಕೆ ಮಾಡುವವರಿಗೆ ತಾವು ಕಲಬೆರಕೆ ಮಾಡುತ್ತೇವೆಂದೇ ತಿಳಿದಿರುವುದಿಲ್ಲ! ಒಮ್ಮೆ ಐಸ್‌ಕ್ರೀಂ ಮಾರಾಟಗಾರರೊಬ್ಬರು ನಮ್ಮ ಬಳಿ ದೂರು ತಂದಿದ್ದರು. ಅವರ ಐಸ್‌ಕ್ರೀಂನ್ನು ಮಹಾನಗರ ಪಾಲಿಕೆಯವರು ವಶಪಡಿಸಿಕೊಂಡು, ಪ್ರಯೋಗಾಲಯಕ್ಕೆ ಕಳುಹಿಸಿದ್ದರಂತೆ.

ಅಲ್ಲಿನ ವಿಶ್ಲೇಷಣಾ ವರದಿಯನ್ನು ನಮ್ಮಲ್ಲಿ ತಂದ, ಈ ತಯಾರಕರು ಕೆರಳಿ ಕೆಂಡವಾಗಿದ್ದರು. ಅದರಲ್ಲಿ ಐಸ್‌ಕ್ರೀಂನ ಕೊಬ್ಬಿನಂಶ ತೀರಾ ಕಡಿಮೆಯಿದೆಯೆಂದೂ, ಇದಲ್ಲದೆ ಅದರಲ್ಲಿ ಸ್ಟಾರ್ಚ್ ಹುಡಿ ಸೇರಿಸಲಾಗಿದೆಯೆಂದೂ ವರದಿಯಾಗಿತ್ತು.



ನಾವು ಐಸ್‌ಕ್ರೀಂ ಮಾಡಲು ಶುದ್ಧ ಹಾಲು ಮತ್ತು ಬ್ರೌನ್ ಎಂಡ್ ಪೋಲ್ಸನ್ ಕಂಪನಿಯ ಕಸ್ಟರ್ಡ್ ಹುಡಿಯನ್ನು ಮಾತ್ರ ಹಾಕಿ, ಬುಷ್ ಕಂಪನಿಯ ಎಸೆನ್ಸ್‌ನ್ನು ಹಾಕುತ್ತೇವೆ ಈ ಮಹಾನಗರ ಪಾಲಿಕೆಯವರು ಲಂಚ ತಿನ್ನಲು ನಮ್ಮನ್ನು



ಪೀಡಿಸುತ್ತಾರೆಂಬುದು ಅವರ ದೂರು. ವಾಸ್ತವವಾಗಿ, ಐಸ್ ಕ್ರೀಂನಲ್ಲಿ 10% ನಷ್ಟು ಹಾಲಿನ ಕೊಬ್ಬಿನಂಶವಿರಬೇಕು, ಅದರಲ್ಲಿ ಇತರ ಯಾವುದೇ ಅಂಶಗಳು ಇರಬಾರದೆಂಬುದು ಇವರಿಗೆ ತಿಳಿದೇ ಇರಲಿಲ್ಲ! ಇದಲ್ಲದೆ, ಕಸ್ಟರ್ಡ್ ಹುಡಿಯೆಂದರೆ ಸ್ಟಾರ್ಚ್ ಎಂಬುದೂ ಇವರಿಗೆ ತಿಳಿದಿರಲಿಲ್ಲ. ಕೆಲವೊಮ್ಮೆ, ತಿಳಿಯದೆ ಕಲಬೆರಕೆಯಾಗುವುದಿದೆ!

## ಕಲಬೆರಕೆ ಅಪಾಯಕಾರಿಯೇಕೆ?

ಕಲಬೆರಕೆಯಿಂದ ಆಹಾರ ವಸ್ತುಗಳ ಪೌಷ್ಟಿಕಾಂಶಗಳು ಕಡಿಮೆಯಾಗುತ್ತವೆ ಮಾತ್ರವಲ್ಲದೆ ಹಾನಿಕಾರಕ ಅಂಶಗಳೂ ಸೇವಿಸುವುದುಂಟು. ಉದಾಹರಣೆ : ಹಾಲಿಗೆ ನೀರನ್ನು ಸೇರಿಸಿದಾಗ, ಹಾಲಿನ ಪೌಷ್ಟಿಕಾಂಶಗಳು ಕಡಿಮೆಯಾಗುತ್ತವೆ. ಇದಲ್ಲದೆ, ನೀರಿನಲ್ಲಿರುವ ರೋಗಾಣುಗಳು ಹಾಲಿನೊಂದಿಗೆ ಸೇರುತ್ತವೆ. ಹಾಲು ಇವುಗಳ ಬೆಳವಣಿಗೆಗೆ ಉತ್ತಮವಾದ ಮಾಧ್ಯಮವಾದ ಕಾರಣ, ಅವು ಹೆಚ್ಚುತ್ತಿರುತ್ತವೆ. ಇವುಗಳಿಂದಾಗಿ ಬಳಕೆದಾರರಿಗೆ ಅನೇಕ ರೀತಿಯ ರೋಗಗಳುಂಟಾಗಬಹುದು.

ಕೆಲವು ಕಲಬೆರಕೆಯ ಬಣ್ಣಗಳು, ಮೂತ್ರಕೋಶದ ಕ್ಯಾನ್ಸರ್ ಉಂಟುಮಾಡುತ್ತವೆ. ಉದಾಹರಣೆ : ಮೆಟ್ಯಾನಿಲ್ ಯೆಲ್ಲೊ ಎಂಬ ಹಳದಿಬಣ್ಣವು ನಿಷೇಧಿತವಾಗಿದೆ. ಬಣ್ಣಬಣ್ಣದ ಜಿಲೇಬಿ, ತಂಪು ಪಾನಿಯಗಳಲ್ಲಿ ಇದನ್ನು ಸೇರಿಸುತ್ತಾರೆ. ಇದನ್ನು ತಿಂದಾಗ ಕೂಡಲೇ ಏನೂ ಆಗಲಿಕ್ಕಿಲ್ಲ. ಆದರೆ, ದೀರ್ಘಾವಧಿಯಲ್ಲಿ ಕ್ಯಾನ್ಸರ್ ಉಂಟಾಗುತ್ತದೆ.

ಇದೇ ರೀತಿಯಲ್ಲಿ ಖಾದ್ಯತೈಲಗಳಿಗೆ ಕಲಬೆರಕೆ ಮಾಡುವ ಅಪಾಯಕಾರಿ ದ್ರವಗಳಿವೆ. ಉದಾಹರಣೆ : ಕಲ್ಕತ್ತಾದ ಪಡಿತರ ಅಂಗಡಿಯೊಂದರಲ್ಲಿ ಖಾದ್ಯ ತೈಲಕ್ಕೆ ಕ್ರಿಸ್ಟೆಲ್ ಫಾಸ್ಪೇಟ್ ಎಂಬ ತೈಲದಂತಹ ದ್ರವವನ್ನು ಕಲಬೆರಕೆ ಮಾಡಲಾಗಿತ್ತು. ಇದರಿಂದಾಗಿ ಹಲವಾರು ಮಂದಿ ವಾತಪೀಡಿತರಾದರು. ಆಹಾರ ಕಲಬೆರಕೆ ಮಾಡುವ ದುಷ್ಟರು, ಬಳಕೆದಾರರ ಪ್ರಾಣಗಳೊಂದಿಗೆ ಆಟವಾಡುತ್ತಿದ್ದಾರೆ. ಇವರಿಗೆ ಕಠಿಣ ಶಿಕ್ಷೆಯಾಗಲೇಬೇಕು. ಇದಲ್ಲದೆ, ಕಲಬೆರಕೆ ಮಾಡುವ ವ್ಯಾಪಾರಿ / ತಯಾರಕರಿಂದ ಯಾವುದೇ ವಸ್ತುಗಳನ್ನು ಖರೀದಿಸದೆ ಅವರನ್ನು ಬಹಿಷ್ಕರಿಸಬೇಕು.







# ಆಹಾರ ಕಲಬೆರಕೆ ಪತ್ತೆ ಹಚ್ಚುವುದಕ್ಕೆ ಸುಲಭ ವಿಧಾನಗಳು

ಬಯೋಕೆಮಿಸ್ಟ್ರಿ ವಿಭಾಗ, ಕಸ್ತೂರ್ಬಾ ವೈದ್ಯಕೀಯ ಕಾಲೇಜು,
ಮಂಗಳೂರು.

ಆಹಾರ ವಸ್ತುಗಳಲ್ಲಿನ ಕಲಬೆರಕೆಯಿಂದ ಬಳಕೆದಾರರ ಆರೋಗ್ಯಕ್ಕೂ, ಆರ್ಥಿಕತೆಗೂ ಹಾನಿಯಿದೆ. ಕೆಲವು ಕಲಬೆರಕೆಯಿಂದ ಘೋರ ರೋಗಗಳುಂಟಾಗುವ ಸಾಧ್ಯತೆಗಳಿದೆ. ಆದರೆ ಇನ್ನು ಕೆಲವರಿಂದ ಪೌಷ್ಟಿಕಾಂಶಗಳ ಕೊರತೆಯುಂಟಾಗುತ್ತದೆ. ಆಹಾರವಸ್ತುಗಳ ಕಲಬೆರಕೆಯನ್ನು ಪತ್ತೆ ಹಚ್ಚುವುದಕ್ಕೆ ಕೆಲವು ಸರಳ ವಿಧಾನಗಳನ್ನು ಇಲ್ಲಿ ಕೊಡಲಾಗಿದೆ. ಇವುಗಳು ಕೇಂದ್ರಿಯ ಆಹಾರ ಕಲಬೆರಕೆ ಪತ್ತೆಹಚ್ಚುವ ಲ್ಯಾಬೊರೆಟರಿಗಳಿಂದ ಪ್ರಕಟವಾಗಿವೆ. ಇವುಗಳನ್ನು ಆಹಾರ ಕಲಬೆರಕೆ ತಡೆ ಘಟಕ, ಡೈರೆಕ್ಟರ್ ಜನರಲ್ ಆಫ್ ಹೆಲ್ತ್ ಸರ್ವಿಸಸ್, ನವದೆಹಲಿ ಇವರು ಪ್ರಕಟಿಸಿದ ಪುಸ್ತಕದಿಂದ ತರ್ಜುಮೆ ಮಾಡಲಾಗಿದೆ. ಈ ಪ್ರಯೋಗಗಳನ್ನು ಕಲಬೆರಕೆ ಪತ್ತೆ ಹಚ್ಚುವುದಕ್ಕೆ ಮಾತ್ರ ಉಪಯೋಗಿಸಬಹುದು. ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆಯಡಿಯಲ್ಲಿ ಈ ಪ್ರಯೋಗಗಳ ಫಲಿತಾಂಶಗಳನ್ನು ಪುರಾವೆಯಾಗಿ ಉಪಯೋಗಿಸಲು ಸಾಧ್ಯವಿಲ್ಲ. ಅವುಗಳನ್ನು ನಮ್ಮ ಮಾಹಿತಿ ಪಡೆಯುವ ಉದ್ದೇಶಕ್ಕೆ ಮಾತ್ರ ಪ್ರಯೋಗಿಸಬಹುದು.

## ಹಾಲಿನ ಕಲಬೆರಕೆ

ನಾವೆಲ್ಲರೂ ಉಪಯೋಗಿಸುವ ಮುಖ್ಯ ಆಹಾರ ವಸ್ತುಗಳ ಒಂದು ವಸ್ತುವಾದ ಹಾಲನ್ನು ಅನೇಕ ರೀತಿಯಿಂದ ಕಲಬೆರಕೆ ಮಾಡಲಾಗುತ್ತಿದೆ. ಈ ಕಲಬೆರಕೆಯಿಂದಾಗಿ ಪೌಷ್ಟಿಕಾಂಶಗಳ ನಷ್ಟವಾಗುತ್ತದೆ ಮಾತ್ರವಲ್ಲದೆ ಸೇರಿಸಿದ ಅಶುದ್ಧ ನೀರು ರೋಗಾಣುಗಳಿರುವ ಬರ್ಫ ಮುಂತಾದುವುಗಳೂ ಆರೋಗ್ಯಕ್ಕೆ ಹಾನಿಕಾರಕ.

ಉತ್ತಮವಾದ ಹಾಲು ಲ್ಯಾಕ್ಟೋಮೀಟರ್‌ನಲ್ಲಿ ಪರೀಕ್ಷೆಗೊಳಪಡಿಸಿದಾಗ ಮಾಪನ 26 ರಿಂದ ಕಡಿಮೆಯಿರಬಾರದು. ನೀರು ಬೆರೆಸಿದಾಗ ಈ ಅಳತೆ ಕಡಿಮೆಯಾಗುತ್ತದೆ. ತತ್ಕಾರಣ, ಕೆಲವರು ನೀರಿಗೆ ಸ್ಟಾರ್ಚ್ ಹುಡಿ, ಗಂಜಿ ಇತ್ಯಾದಿಗಳನ್ನು ಸೇರಿಸುತ್ತಾರೆ. ಆಗ ಲ್ಯಾಕ್ಟೋಮೀಟರ್‌ನ ಅಳತೆ ಸರಿಯಾಗಿಯೇ ಪತ್ತೆ ಹಚ್ಚಲು ಸುಲಭವಾದ ವಿಧಾನವಿದೆ. ತಣ್ಣಗಿನ ಹಾಲಿಗೆ ಒಂದು ತೊಟ್ಟು ಟಿಂಕ್ಚರ್ ಆಫ್ ಐಯೊಡಿನ್ ಹಾಕಿದರೆ ಅದು ನೀಲಿ ಬಣ್ಣಕ್ಕೆ ತಿರುಗುವುದು.







ಕೆಲವರು ಹಾಲಿನ ಕೆನೆ ತೆಗೆದು ಮಾರಾಟ ಮಾಡುತ್ತಾರೆ. ಇದನ್ನು ಪತ್ತೆ ಹಚ್ಚಬೇಕಾದರೆ ಲ್ಯಾಕ್ಟೋಮೀಟರ್‌ನ ಮಾಪನವನ್ನು ಗಮನಿಸಿದರೆ ಸಾಕು. ಇದು 26ಕ್ಕಿಂತ ಹೆಚ್ಚಿರುತ್ತದೆ, ಮತ್ತು ಹಾಲು ದಪ್ಪವಿರುತ್ತದೆ. ಕೆನೆಯ ಪ್ರಮಾಣವನ್ನು ಪರೀಕ್ಷಿಸಲು ವಿಶೇಷವಾದ ವಿಧಾನಗಳು ಪ್ರಯೋಗಾಲಯಗಳಲ್ಲಿ ಮಾತ್ರ ಸಾಧ್ಯವಿವೆ.

## ಹಾಲಿನ ಉತ್ಪನ್ನಗಳ ಕಲಬೆರಕೆ

**ಬೆಣ್ಣೆ** : ಬೆಣ್ಣೆಯನ್ನು ಕಲಬೆರಕೆ ಮಾಡಲು ಬಟಾಟೆಯ ಚಟ್ನಿ, ಗೆಣಸಿನ ಚಟ್ನಿ ಇತ್ಯಾದಿಗಳನ್ನು ಉಪಯೋಗಿಸಲಾಗುತ್ತದೆ. ಇವುಗಳೂ ಮೃದು ಹಾಗೂ ನಸುಹಳದಿ ಬಣ್ಣವಾದ ಕಾರಣ ಇದನ್ನು ಪತ್ತೆಹಚ್ಚಲು ಸ್ವಲ್ಪ ಕಷ್ಟವಾಗಬಹುದು.

ಇದನ್ನು ಪತ್ತೆಹಚ್ಚಲು ಬೆಣ್ಣೆಯನ್ನು ಸ್ವಲ್ಪ ನೀರಿನೊಂದಿಗೆ ಕುದಿಸಿ, ತಣಿಸಬೇಕು. ಅದಕ್ಕೆ ಒಂದು ತೊಟ್ಟು ಐಯೋಡಿನ್ ಸೇರಿಸಿದರೆ ಅದು ನೀಲಿ ಬಣ್ಣ ಪಡೆಯುವುದು.

ಗಿಣ್ಣು, ಐಸ್ ಕ್ರೀಂ ಇತ್ಯಾದಿಗಳಲ್ಲೂ ಕಲಬೆರಕೆ ಪತ್ತೆ ಹಚ್ಚಲು ಮೇಲೆ ಕಾಣಿಸಲಾದ ವಿಧಾನವೇ ಸೂಕ್ತ. ಐಸ್‌ಕ್ರೀಂಗೆ ಹೆಚ್ಚಿನ ಕಡೆಗಳಲ್ಲಿ ಕಸ್ಟರ್ಡ್ ಹುಡಿಯನ್ನು ಸೇರಿಸಲಾಗುತ್ತದೆ. ಮಾರಾಟ ಮಾಡುವ ಐಸ್‌ಕ್ರೀಂಗೆ ಕಸ್ಟರ್ಡ್ ಹುಡಿಯನ್ನು ಸೇರಿಸುವುದು ಕಲಬೆರಕೆಯೆನಿಸುವುದು.

**ತುಪ್ಪ** : ತುಪ್ಪಕ್ಕೆ ಕಲಬೆರಕೆಮಾಡಲು ವನಸ್ಪತಿ ಯಾ ಮರ್ಜರಿನ್‌ನ್ನು ಸೇರಿಸಲಾಗುತ್ತದೆ. ಇದನ್ನು ಪತ್ತೆ ಹಚ್ಚಲು ಒಂದು ಚಮಚ ತುಪ್ಪಕ್ಕೆ ಅಷ್ಟೇ ಮಟ್ಟದ ಪ್ರಬಲ ಹೈಡ್ರೋಕ್ಲೋರಿಕ್ ಆಮ್ಲವನ್ನು ಬೆರೆಸಬೇಕು. ಬಳಿಕ ಸರಿಯಾಗಿ ಕುಲುಕಿಸಬೇಕು. ಬಳಿಕ ಒಂದು ಚಿಟಿಕೆ ಸಕ್ಕರೆ ಹುಡಿ ಬೆರೆಸಿ, ಐದು ನಿಮಿಷ ಕಾಯಬೇಕು.

ಹೈಡ್ರೋಕ್ಲೋರಿಕ್ ಆಮ್ಲ ಸೇರಿಸಿದಾಗಲೇ ಕೆಂಪು ಬಣ್ಣ ಬಂದಲ್ಲಿ ತುಪ್ಪಕ್ಕೆ ಹಳದಿ ಬಣ್ಣ ಬರಲು ಕೋಲ್‌ಟಾರ್ ಬಣ್ಣಗಳನ್ನು ಸೇರಿಸಲಾಗಿದೆ ಎಂದರ್ಥ. ಇವು ಕ್ಯಾನ್ಸರ್ ಉಂಟುಮಾಡುತ್ತವೆ.

ಸಕ್ಕರೆ ಸೇರಿಸಿ ಕುಲುಕಿದ ನಂತರ ಕೆಂಪು ಬಣ್ಣ ಬಂದಲ್ಲಿ ತುಪ್ಪಕ್ಕೆ ಕಲಬೆರಕೆ ಮಾಡಲು ವನಸ್ಪತಿ ಯಾ ಮರ್ಜರಿನ್ ಸೇರಿಸಲಾಗಿದೆಯೆಂದು ತಿಳಿಯಬಹುದು.

ಬೆಣ್ಣೆಗೂ ವನಸ್ಪತಿ ಯಾ ಮರ್ಜರಿನ್‌ನಿಂದ ಕಲಬೆರಕೆ ಮಾಡಲಾಗಿದೆಯೇ ಎಂದು ತಿಳಿಯಲು ಇದೇ ಪ್ರಯೋಗದಿಂದ ಸಾಧ್ಯ.





## ಸಕ್ಕರೆ ಮತ್ತು ಸಕ್ಕರೆ ಹುಡಿ.

ಇವುಗಳಿಗೆ ಕಲಬೆರಕೆ ಮಾಡಲು ಚಾಕ್ ಹುಡಿ ಯಾ ಧೋಬಿಖಾರವನ್ನು ಸೇರಿಸಲಾಗುತ್ತದೆ. ಇವುಗಳನ್ನು ಪತ್ತೆಹಚ್ಚಲು : –



1. ಒಂದು ಚಮಚ ಹುಡಿಗೆ ಸುಮಾರು ಮೂರು ಪಾಲಿನಷ್ಟು ನೀರು ಸೇರಿಸಿ ಸಿಗುವ ದ್ರಾವಣವನ್ನು ಪರಿಶೀಲಿಸಿ. ಇದು ಬಿಳಿ ಬಣ್ಣದಾದರೆ ಸಕ್ಕರೆಗೆ / ಸಕ್ಕರೆ ಹುಡಿಗೆ ಚಾಕ್‌ಹುಡಿಯನ್ನು ಕಲಬೆರಕೆ ಮಾಡಲಾಗಿದೆ. ಈ ಮುಂಚೆ ತಯಾರಿಸಿದ ದ್ರಾವಣಕ್ಕೆ ಕೆಲವು ತೊಟ್ಟು ದುರ್ಬಲ ಹೈಡ್ರೊಕ್ಲೋರಿಕ್ ಆಮ್ಲವನ್ನು ಹಾಕಿ. ಗುಳ್ಳೆಗಳು ಬಂದಲ್ಲಿ ಧೋಬಿ ಖಾರವನ್ನು ಕಲಬೆರಕೆ ಮಾಡಲಾಗಿದೆಯೆಂದು ತಿಳಿಯಬಹುದು.

### ಜೇನುತುಪ್ಪ :

ಕೆಲವೊಮ್ಮೆ ಜೇನುತುಪ್ಪಕ್ಕೆ ನೀರನ್ನು ಸೇರಿಸಿ ಕಲಬೆರಕೆ ಮಾಡಲಾಗುತ್ತದೆ. ಇದನ್ನು ಪತ್ತೆಹಚ್ಚಲು ಜೇನುತುಪ್ಪಕ್ಕೆ ಒಂದು ಹತ್ತಿಯ ಬತ್ತಿಯನ್ನು ಮುಳುಗಿಸಿ ಅದನ್ನು ಬೆಂಕಿಗೆ ಹಿಡಿಯಬಹುದು. ಆಗ ಪರ-ಪರನೆ ಶಬ್ದದೊಂದಿಗೆ ಉರಿದರೆ ಅದು ನೀರು ಮಿಶ್ರಿತವೆನ್ನಬಹುದು.

ಆದರೆ, ಹೆಚ್ಚಿನ ಬಾರಿ ಜೇನು ತುಪ್ಪವನ್ನು ಕಲಬೆರಕೆ ಮಾಡಲು ಬೆಲ್ಲದ ಪಾಕವನ್ನು ಉಪಯೋಗಿಸಲಾಗುತ್ತದೆ. ಅದನ್ನು ಮೇಲಿನ ವಿಧಾನದಿಂದ ಪತ್ತೆ ಹಚ್ಚಲು ಸಾಧ್ಯವಿಲ್ಲ. ಅದರ ಪತ್ತೆ ಪ್ರಯೋಗಾಲಯದಲ್ಲಿ ಮಾತ್ರ ಸಾಧ್ಯ.

### ಸಿಹಿತಿಂಡಿಗಳಲ್ಲಿ ಕಲಬೆರಕೆ

1. ಬಣ್ಣಕ್ಕಾಗಿ ಸಿಹಿತಿಂಡಿಗಳಿಗೆ ಕಡಿಮೆ ಬೆಲೆಯ ಕೋಲ್‌ಟಾರ್ ಬಣ್ಣವಾದ ಮೆಟ್ಯಾನಿಲ್ ಹಳದಿಯನ್ನು ಸೇರಿಸಲಾಗುತ್ತದೆ. ಅದು ನೋಡಲು ಆಕರ್ಷಕವಾಗಿ ಕಂಡರೂ, ಸೇವನೆಯಿಂದ ಮೂತ್ರಕೋಶದ ಕ್ಯಾನ್ಸರ್ ಉಂಟಾಗುತ್ತದೆ.

   ಇದನ್ನು ಪತ್ತೆ ಹಚ್ಚಲು ತಿಂಡಿಯನ್ನು ಉಗುರು ಬೆಚ್ಚನೆ ನೀರಿನಲ್ಲಿ ಕದಡಿ, ಅದಕ್ಕೆ ಕೆಲವು ತೊಟ್ಟು ಪ್ರಬಲ ಹೈಡ್ರೋಕ್ಲೋರಿಕ್ ಆಮ್ಲವನ್ನು ಹಾಕಬೇಕು. ಗುಲಾಬಿ ಬಣ್ಣ ಬಂದಲ್ಲಿ ಮೆಟ್ಯಾನಿಲ್ ಹಳದಿ ಇದೆಯೆಂದು ತಿಳಿಯಬಹುದು.

2. ಸಿಹಿಯುಂಟುಮಾಡುವ ಕಡಿಮೆ ಬೆಲೆಯ ವಸ್ತುವಾಗಿ ಸ್ಯಾಕರಿನ್ ಬಳಸಲಾಗುತ್ತದೆ. ಇದು ಸಕ್ಕರೆಗಿಂತ 2000 ಪಟ್ಟು ಸಿಹಿಯಾಗಿದೆಯಾದರೂ ಇದರ ಉಪಯೋಗದಿಂದ ಮೂತ್ರಕೋಶದ ಕ್ಯಾನ್ಸರ್ ಉಂಟಾಗುವ ಸಾಧ್ಯತೆಗಳಿರುವ ಕಾರಣ ಇದನ್ನು ಆಹಾರ ವಸ್ತುಗಳಿಗೆ ಉಪಯೋಗಿಸುವುದು ಸೂಕ್ತವಲ್ಲ.

   ಸಿಹಿತಿಂಡಿಯನ್ನು ನಾಲಿಗೆಗೆ ಹಚ್ಚಿದಾಗ ಸಿಹಿ ರುಚಿಯು ದೀರ್ಘಕಾಲವಿರುವುದರಿಂದ ಇದನ್ನು ಪತ್ತೆಹಚ್ಚಬಹುದು. ಇದಕ್ಕಿಂತಲೂ ನಿಖರವಾದ ಪರೀಕ್ಷಾ ವಿಧಾನಗಳನ್ನು ಪ್ರಯೋಗಾಲಯಗಳಲ್ಲಿ ನಡೆಸಬಹುದು.

3 ಅಲುಮಿನಿಯಂ ಫ್ಯಾಲ್ : ಸಿಹಿತಿಂಡಿಗಳ ಮೇಲೆ ಆಕರ್ಷಕವಾಗಿ ಕಾಣಲು ಅಲುಮಿನಿಯಂ ಫ್ಯಾಲ್ ಬಳಸುತ್ತಾರೆ. ಇದು ಕಲಬೆರಕೆ. ಉಪಯೋಗ







ಮಾಡಬೇಕಾದದ್ದು ಬೆಳ್ಳಿಯ ಫ್ಯಾಲ್ ಮಾತ್ರ. ಅಲುಮಿನಿಯಂ ಫ್ಯಾಲ್ ನೋಡಲು ಬಿಳಿ – ಬೂದು ಮಿಶ್ರಿತ ಬಣ್ಣದಾಗಿರುತ್ತದೆ. ಮಾತ್ರವಲ್ಲದೆ. ಪ್ರಬಲ ಹೈಡ್ರೋಕ್ಲೋರಿಕ್ ಆಮ್ಲದಲ್ಲಿ ಸುಲಭವಾಗಿ ಕರಗುತ್ತದೆ. ಬೆಳ್ಳಿಯ ಫ್ಯಾಲ್ ಕರಗುವುದಿಲ್ಲ.

## ಇತರ ಆಹಾರ ಪದಾರ್ಥಗಳಲ್ಲಿ ಕಲಬೆರಕೆ

**ಕೇಸರಿಬೇಳೆ** : ಇದು ವಿಷಕಾರಿಯಾಗಿದ್ದು, ಸೇವನೆಯಿಂದ ಪಕ್ಷವಾತ ರೋಗವುಂಟಾಗುತ್ತದೆ. ತತ್ಕಾರಣ, ಇದನ್ನು ಮನುಷ್ಯ ಆಹಾರಕ್ಕೆ ಉಪಯೋಗಿಸಬಾರದೆಂದು ನಿಷೇದಿಸಲಾಗಿದೆ.

1. ಕೇಸರಿಬೇಳೆಯ ದಳಗಳು ಚೌಕಾಕೃತಿಯವಾಗಿದೆ. ಇದರ ಒಂದು ಬದಿಯಲ್ಲಿ ಅಪ್ಪವಾಗಿರುತ್ತದೆ.

2. ದುರ್ಬಲ ಹೈಡ್ರೋಕ್ಲೋರಿಕ್ ಆಮ್ಲವನ್ನು ಹಾಕಿ ಕುದಿಯುವ ನೀರಿನ ಮೇಲೇ 15 ನಿಮಿಷ ಇಟ್ಟಲ್ಲಿ ಗುಲಾಬಿ ಬಣ್ಣ ಬಂದಲ್ಲಿ ಅದು ಕೇಸರಿಬೇಳೆ.

## ರವೆಯಲ್ಲಿ ಕಬ್ಬಿಣದ ಹುಡಿ

ಒಂದು ಆಯಸ್ಕಾಂತವನ್ನು ಅದರೊಳಗೆ ಆಡಿಸಿದರಾಯಿತು. ಕಬ್ಬಿಣದ ಹುಡಿ ಅದಕ್ಕೆ ಹತ್ತಿಕೊಳ್ಳುತ್ತಿದೆ.

## ಮೆಣಸಿನ ಹುಡಿ

ಮೆಣಸಿನ ಹುಡಿಗೆ ಕಲಬೆರಕೆ ಮಾಡಲು ಕೃತಕ ಬಣ್ಣ, ಇಟ್ಟಿಗೆಯ ಹುಡಿ ಇತ್ಯಾದಿಗಳನ್ನು ಬೆರೆಸಲಾಗುತ್ತದೆ. ಇದನ್ನು ಪರೀಕ್ಷಿಸಲು ಒಂದು ಚಮಚ ಹುಡಿಯನ್ನು ಒಂದು ಗ್ಲಾಸ್ ನೀರಿಗೆ ಸೇರಿಸಬೇಕು. ನೀರು ಬಣ್ಣ ಪಡೆದಲ್ಲಿ ಅದು ಕೃತಕ ಬಣ್ಣವನ್ನು ಸೇರಿಸಿದ ಲಕ್ಷಣ. ಇಟ್ಟಿಗೆಯ ಹುಡಿಯಿದ್ದಲ್ಲಿ ಅದು ನೀರಿನ ತಳಸೇರುವುದು.

## ಚಾ ಎಲೆಗಳು

ಕೆಲವೊಮ್ಮೆ ಒಮ್ಮೆ ಉಪಯೋಗಿಸಿದ ಚಾ ಎಲೆಗಳಿಗೆ ಬಣ್ಣ ಬೆರೆಸಿ ಅದನ್ನು ಮತ್ತೆ ಮಾರಾಟಮಾಡಲಾಗುತ್ತದೆ. ಇದಲ್ಲದೆ, ಈ ಹುಡಿಗೆ ಕೆಲವು ಬೇಳೆಗಳ ಹೊರಗಿನ ಸಿಪ್ಪೆಯನ್ನೂ ಸೇರಿಸಲಾಗುತ್ತದೆ. ಇವುಗಳಿಗೆ ಕೆಳಗಿನ ಪರೀಕ್ಷೆಗಳಿವೆ.

1 ಫಿಲ್ಟರ್ ಕಾಗದದ ಮೇಲೆ ಹುಡಿಯ ಕೆಲವು ಕಣಗಳನ್ನು ಹಾಕಿ ಬಳಿಕ ನೀರನ್ನು ಚಿಮುಕಿಸಿದಲ್ಲಿ ಕೃತಕ ಬಣ್ಣಗಳನ್ನು ಫಿಲ್ಟರ್ ಕಾಗದವು ಸೆಳೆದುಕೊಳ್ಳುತ್ತದೆ.







2 ಚಾಹುಡಿಗೆ ಸುಣ್ಣವನ್ನು ಸೇರಿಸಿದಾಗ ಕೆಂಪು, ಗುಲಾಬಿ ಬಣ್ಣಗಳು ಮೂಡಿಬಂದಲ್ಲಿ ಅದು ಕೃತಕ ಬಣ್ಣಗಳು ಸೇರಿರುವ ಪುರಾವೆ. ಶುದ್ಧವಾದ ಚಾ ಹುಡಿಯ ಕ್ಲೋರೊಫಿಲ್‌ನ ಹಸಿರು ಬಣ್ಣ ಮಾತ್ರ ತಳೆಯುವುದು.

## ವಿನೆಗರ್‌ನಲ್ಲಿ ಇತರ ಆಸಿಡ್‌ಗಳು

ವಿನೆಗರ್‌ನಲ್ಲಿ ಎಸಿಟಿಕ್ ಆಮ್ಲ ಮಾತ್ರವಿರಬೇಕು. ಆದರೆ, ಕೆಲವರು ಇದಕ್ಕೆ ಆರೋಗ್ಯಕ್ಕೆ ಹಾನಿಕರವಾದ ಸಲ್ಫ್ಯೂರಿಕ್ ಆಮ್ಲವನ್ನು ಸೇರಿಸಿ ಕಲಬೆರಕೆ ಮಾಡುತ್ತಾರೆ.

ಇದನ್ನು ಪತ್ತೆ ಹಚ್ಚಲು ಮೆಟ್ಯಾನಿಲ್ ಹಳದಿ ಪೇಪರನ್ನು ವಿನೆಗರ್‌ನಲ್ಲಿ ಮುಳುಗಿಸಿದಾಗ ಕೆಂಪು – ಗುಲಾಬಿ ಬಣ್ಣ ಬಂದಲ್ಲಿ ವಿನೆಗರ್‌ನಲ್ಲಿ ಪ್ರಬಲ ಆಮ್ಲವಿದೆಯೆಂಬುದಕ್ಕೆ ಪುರಾವೆ.

## ಆಹಾರ ಕಲಬೆರಕೆಯ ಬಗ್ಗೆ ಎಚ್ಚರಿಕೆ

ಆಹಾರ ಕಲಬೆರಕೆಯಿಂದ ಆರೋಗ್ಯಕ್ಕೆ ಹಾನಿ, ಹಣದ ನಷ್ಟ.

ಆಹಾರ ಕಲಬೆರಕೆಯು ಶಿಕ್ಷಾರ್ಹ, ಕ್ರಿಮಿನಲ್ ಅಪಹಾಧ.

ಆಹಾರ ಕಲಬೆರಕೆಯಿಂದ ಘೋರ ಪರಿಣಾಮಗಳಾಗುತ್ತವೆ.

## ಈ ಬಗ್ಗೆ ಏನು ಮಾಡಬಹುದು?

ಆರೋಗ್ಯಾಧಿಕಾರಿಗಳಲ್ಲಿ ದೂರು ಸಲ್ಲಿಸಬಹುದು

ಬಳಕೆದಾರರ ವ್ಯಾಜ್ಯ ಪರಿಹಾರ ವೇದಿಕೆಗಳಲ್ಲಿ ದಾವೆ ಹೂಡಬಹುದು.

ಕಲಬೆರಕೆ ಆಹಾರ ಮಾರಾಟ ಮಾಡುವವರಲ್ಲಿ ಆಹಾರ ವಸ್ತುಗಳನ್ನು ಖರೀದಿಸುವುದನ್ನು ನಿಲ್ಲಿಸಿ ಅವರಿಗೆ ಪಾಠ ಕಲಿಸಬಹುದು.

ಈ ಕಲಬೆರಕೆ ಪತ್ತೆ ಹಚ್ಚುವ ವಿಧಾನಗಳ ಪ್ರಾತ್ಯಕ್ಷಿಕೆ, ಕಲಬೆರಕೆಯ ಆಹಾರವಸ್ತುಗಳಿಂದ ಉಂಟಾಗುವ ತೊಂದರೆಗಳ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಯಾ ಬಳಕೆದಾರರ ರಕ್ಷಣಾ ಕಾಯಿದೆಯಡಿಯಲ್ಲಿ ದಾವೆಹೂಡಬೇಕಾದಲ್ಲಿ ಈ ಕರಪತ್ರದ ಪ್ರಕಾಶಕರನ್ನು ಸಂಪರ್ಕಿಸಬಹುದು.

ಸಾರ್ವಜನಿಕ ಹಿತಾಸಕ್ತಿಯಲ್ಲಿ ಈ ವಿಧಾನಗಳನ್ನು ನಿಮಗೆ ತಿಳಿಸಲು ಬಳಕೆದಾರರ ಶಿಕ್ಷಣ ಟ್ರಸ್ಟ್, ಮೈಕ್ರೋವೇವ್ ಸ್ಟೇಷನ್ ರಸ್ತೆ, ಮಂಗಳೂರು – **575 006**, ಟೆಲಿಫೋನ್ ನಂಬ್ರ – **414973** ವತಿಯಿಂದ ಈ ಕರಪತ್ರವನ್ನು ಪ್ರಕಟಿಸಲಾಗಿದೆ.





# ಕೆಲವು ಕಹಿ ಅನುಭವಗಳು

ಬಳಕೆದಾರರ ಆಂದೋಲನದಲ್ಲಿ ಕಾರ್ಯವಹಿಸುವಾಗ ಕೆಲವು ಕಹಿ ಅನುಭವಗಳಾಗುವುದಿದೆ. ಬಳಕೆದಾರರು ನಮ್ಮ ಸಂಘಟನೆಯ ಹೆಸರನ್ನು ಉಪಯೋಗಿಸಿ, ತಮ್ಮ ವೈಯಕ್ತಿಕ ದ್ವೇಷ ಸಾಧನೆ, ಲಾಭ ಪಡೆಯುವ ಉದ್ದೇಶ, ತಮ್ಮ ತಪ್ಪನ್ನು ಅಡಗಿಸಿಕೊಳ್ಳುವುದು ಮುಂತಾದುವನ್ನು ಮಾಡಬಹುದು. ನಮ್ಮ ಮೇಲೆ ದ್ವೇಷ ಸಾಧಿಸಹೊರಟ ಪೂರೈಕೆದಾರರು, ಬೆದರಿಕೆ ಇತ್ಯಾದಿಗಳನ್ನು ಕೊಡಬಹುದು ಯಾ ದೈಹಿಕ, ಮಾನಸಿಕ ಹಿಂಸೆಗೂ ಪ್ರಯತ್ನಿಸಬಹುದು. ಸಾರ್ವಜನಿಕ ಜೀವನದಲ್ಲಿರುವ ವ್ಯಕ್ತಿಗಳಿಗೆ ಇದೆಲ್ಲಾ ಸಾಮಾನ್ಯವೆನಿಸಬಹುದಾದರೂ, ಎದುರಿಸುವ ಎದೆಗಾರಿಕೆ ಬೇಕಾಗುತ್ತದೆ.

**ಸೆಕೆಂಡ್ ಹ್ಯಾಂಡ್ ಟಿ.ವಿ. ಖರೀದಿಸಿದವರು**

ಒಮ್ಮೆ ಒಬ್ಬ ಬಳಕೆದಾರರು ನಮ್ಮಲ್ಲೊಂದು ದೂರು ತಂದರು. ಅವರು ಖ್ಯಾತ ಕಂಪೆನಿಯೊಂದರ 12 " ಕಪ್ಪು – ಬಿಳುಪು ಟಿ.ವಿ.ಯನ್ನು ಖರೀದಿಸಿದ್ದರು. ಆ ಟಿ.ವಿ.ಯನ್ನು ಖರೀದಿಸುವಾಗ ಅವರಿಗೆ ಗ್ಯಾರಂಟಿ ಕಾರ್ಡು ಕೊಡಲಾಗಲಿಲ್ಲ. ಬದಲಿಗೆ ಬಿಲ್‌ನ ಮೇಲೆ "12 months guarantee" ಎಂದು ಬರೆಯಲಾಗಿತ್ತು. ಈ ಉಪಕರಣವು ಖರೀದಿಸಿದ ಕೆಲವೇ ದಿನಗಳೊಳಗೆ ತೊಂದರೆ ಕೊಡಲು ಆರಂಭಿಸಿತು. ಆಗ ಇವರು ಮತ್ತೆ ಮಾರಾಟಗಾರರ ಬಳಿಹೋಗಿ, ತಮಗೆ ಆ ಸೆಟ್ಟಿನ ಉಪಯೋಗದ ಪುಸ್ತಕವನ್ನಾದರೂ ಕೊಡಬೇಕೆಂದು ಪಟ್ಟುಹಿಡಿದರು. ಆಗ, ಮಾರಾಟಗಾರರು ತಮ್ಮಲ್ಲಿದ್ದ ಹಳೆಯ ಪುಸ್ತಕವೆನ್ನಲಾದ ಒಂದನ್ನು ಕೊಟ್ಟರು. ಆದರೆ, ಅದನ್ನು ತೆರೆದ ಬಳಕೆದಾರರಿಗೆ ಆಘಾತವಾಯಿತು. ಅದರೊಳಗೆ, ಇದೇ ಸೆಟ್ಟನ್ನು ಮತ್ತೊಬ್ಬರಿಗೆ ಮಾರಾಟಮಾಡಿದ ಬಿಲ್ ಇತ್ತು. ಕೆಲವು ತಿಂಗಳ ಹಿಂದೆ ಮಾರಾಟವಾದ ಇದು ಪ್ರಾಯಶಃ ದೋಷಗಳಿದ್ದ ಕಾರಣ, ಮಾರಾಟಗಾರರಿಗೆ ವಾಪಸು ಬಂದಿತ್ತು. ಮಾರಾಟಗಾರರು ಅದನ್ನೇ ಹೊಸತೆಂದು ಈ ಬಳಕೆದಾರರಿಗೆ ಮಾರಾಟಮಾಡಿದ್ದರು! ಬಳಕೆದಾರರು ಈ ಬಗ್ಗೆ ನಮ್ಮ ಟ್ರಸ್ಟ್‌ಗೆ ದೂರು ಸಲ್ಲಿಸಿದರು. ನಮ್ಮ ಸೂಚನೆಯಂತೆ ಈ ಬಗ್ಗೆ ಎಂ.ಆರ್.ಟಿ.ಪಿ. ಕಮಿಷನ್‌ಗೆ ದೂರು ಸಲ್ಲಿಸಿದರು.

ಈ ದೂರಿನ ಇತ್ಯರ್ಥವಾಗದ ಕಾರಣ, ಆಗಾಗ ಬಂದು ನಮ್ಮಲ್ಲಿ ಆ ಬಗ್ಗೆ ವಿಚಾರಿಸುತ್ತಿದ್ದರು. ಕೆಲವು ತಿಂಗಳುಗಳ ಬಳಿಕ, ಇವರು ಬರುವುದು ನಿಂತುಹೋಯಿತು. ಆಕಸ್ಮಾತ್ತಾಗಿ ದಾರಿಯಲ್ಲಿ ಭೇಟಿಯಾದ ಇವರಿಗೆ ತಮ್ಮ ದೂರು ಏನಾಯಿತೆಂದು

ಬಳಕೆದಾರರ ಎಚ್ಚರಿಕೆ



ಕೇಳಿದೆ. ಆಗ ತೃಪ್ತಿಯ ನಗೆ ಬೀರಿದ ಅವರು ತಮಗೆ ಕಂಪೆನಿಯಿಂದ ಹೊಸ ಟಿ.ವಿ. ಸೆಟ್ಟು ಮತ್ತು ರೂ. 3000/- ನಗದು ಪರಿಹಾರ ಸಿಕ್ಕಿರುವ ಬಗ್ಗೆ ತಿಳಿಸಿದರು. ಈ ಬಗ್ಗೆ ನಮಗೇಕೆ ತಿಳಿಸಲಿಲ್ಲವೆಂದು ಕೇಳಿದಾಗ ಆಘಾತವಾದ ಉತ್ತರ ಬಂತು"ನಿಮಗೆ ತಿಳಿಸಬಾರದೆಂದು ಕಂಪೆನಿಯವರು ಹೇಳಿದ್ದಾರೆ. ನೀವು ಆ ಬಗ್ಗೆ ಪತ್ರಿಕೆಗಳಲ್ಲಿ ಪ್ರಕಟಿಸಿದರೆ ಉಳಿದವರಿಗೆಲ್ಲಾ ಗೊತ್ತಾಗುತ್ತದಂತೆ; ಮತ್ತೆ ಅವರೂ ಈ ರೀತಿ ಪರಿಹಾರ ಕೇಳಬಹುದು". ಒಟ್ಟಿನಲ್ಲಿ ತಮ್ಮ ಕೆಲಸವಾದರಾಯಿತು. ಉಳಿದವರ ಗೋಜು ನಮಗೇಕೆ? ನಮ್ಮ ಸಂಘಟನೆಯು ಈ ಪ್ರಕರಣದಲ್ಲಿ ಕಾರ್ಯೋನ್ಮುಖರಾಗದಿದ್ದರೆ ಇವರಿಗೆ ಪರಿಹಾರವಾಗಲಿ ಇತರ ಸೌಲಭ್ಯಗಳಾಗಲೀ ಸಿಕ್ಕುತ್ತಿರಲಿಲ್ಲ. ಆದರೆ, ಅವು ಸಿಕ್ಕಿದೊಡನೆ ಅವರು ನಮ್ಮನ್ನು ಕಡೆಗಣಿಸಲು ಸಿದ್ಧರಿದ್ದರು!

ಇದು ಗೊತ್ತಾದ ಬಳಿಕ ನಾವು ಈ ಪ್ರಕರಣದ ಬಗ್ಗೆ ತಯಾರಿಕೆ ಮಾಡಿದ ಕಂಪೆನಿ, ಮಾರಾಟಗಾರರ ಹೆಸರು ಮತ್ತು ನಡೆದ ಘಟನೆಗಳನ್ನೆಲ್ಲಾ ವಿವರಿಸಿಯೇ ಪತ್ರಿಕೆಗಳಲ್ಲಿ ಪ್ರಕಟಣೆಗಳನ್ನು ಕೊಟ್ಟೆವು.

## ಸಿನೇಮಾ ಮಂದಿರದಲ್ಲಿ ಬಳಕೆದಾರನ ಗೋಳು

ಒಮ್ಮೆ ನಮ್ಮಲ್ಲಿ ಅತ್ಯಂತ ಉದ್ರಿಕ್ತ ಬಳಕೆದಾರರೊಬ್ಬರು ಬಂದರು. ಚಿತ್ರಮಂದಿರವೊಂದರ ಮಾಲಿಕರನ್ನು ಬೈಯುತ್ತಾ ಬಂದ ಇವರು, ತಾನು ಸಿನಿಮಾಕ್ಕೆ ಟಿಕೇಟು ಖರೀದಿಸಿ, ನಿಗದಿಯಾದ ಸೀಟು ನಂಬ್ರದಲ್ಲಿ ಕುಳಿತಿದ್ದೆನೆಂದೂ, ಆಗ ಸ್ವಲ್ಪ ಸಮಯದ ನಂತರ ಅದೇ ಸೀಟಿಗೆ ಬೇರೆಯೊಬ್ಬರು ಬಂದಾಗ ಚಿತ್ರ ಮಂದಿರದ ಸಿಬ್ಬಂದಿ ತಮ್ಮನ್ನು ತೀರಾ ಕೆಟ್ಟ ರೀತಿಯಲ್ಲಿ ನಡೆಸಿಕೊಂಡರೆಂದೂ ದೂರಿದರು. ತಮ್ಮ ಟಿಕೇಟಿನ ತುಂಡನ್ನೂ ಪುರಾವೆಯಾಗಿ ತಂದಿದ್ದರು.

ಈ ಬಗ್ಗೆ ಸಂಬಂಧಪಟ್ಟ ಥೇಟರಿನ ಮಾಲಿಕರನ್ನು ಸಂಪರ್ಕಿಸಿದಾಗ ಅವರು ಆ ಟಿಕೇಟಿನ ತುಂಡನ್ನು ತಮ್ಮಲ್ಲಿ ತರಬೇಕೆಂದು ವಿನಂತಿಸಿದರು. ಸಾಮಾನ್ಯವಾಗಿ ನಾವು ಇಂತಹದಕ್ಕೆ ಒಪ್ಪದಿದ್ದರೂ, ಸೌಜನ್ಯಕ್ಕಾಗಿ ಅಲ್ಲಿ ಹೋದೆವು. ಹೋದಾಗ ಅವರು ತಮ್ಮ ದಾಖಲೆಗಳನ್ನು ತೋರಿಸಿದರು. ಈ ಟಿಕೆಟ್ ಹಿಂದಿನ ದಿನದ್ದಾಗಿತ್ತು! ಬಳಕೆದಾರರು ಕಾಳಸಂತೆಯಲ್ಲಿ ಹಿಂದಿನ ದಿನದ ಟಿಕೇಟನ್ನು ಖರೀದಿಸಿ, ಪ್ರವೇಶಿಸಿದ್ದರು. ಬಳಿಕ, ಅವರಿಗೆ ಚಿತ್ರಮಂದಿರದ ಮಾಲಿಕರು ನಡೆದದ್ದನ್ನೆಲ್ಲಾ ವಿವರಿಸಿದರೂ ಒಪ್ಪದೆ, ಬಳಕೆದಾರರ ಸಂಘಟನೆಗೆ ದೂರು ಸಲ್ಲಿಸಿ, ನಿಮಗೆ ಬುದ್ಧಿಕಲಿಸುವೆಯೆಂದು ಬೆದರಿಕೆಯೊಡ್ಡಿ ಬಂದಿದ್ದರಂತೆ! ಈ ಪ್ರಕರಣವನ್ನು ಅಲ್ಲಿಗೇ ಮುಕ್ತಾಯಗೊಳಿಸಿದೆವು. ಮರುದಿನ ಈ ಬಗ್ಗೆ ನಮ್ಮನ್ನು ಮಾತನಾಡಿಸಲು ಬರುತ್ತೇನೆಂದು ಹೋದ ದೂರು ಕೊಟ್ಟವರು ಮತ್ತೆ ಬಂದೇ ಇಲ್ಲ.







## ಗಾದ್ರೆಜ್ ಕಂಪೆನಿಯ ಉಚಿತ ಕೊಡುಗೆ !

ಗಾದ್ರೆಜ್ ಸೋಪ್ ಕಂಪೆನಿಯವರು ಹೊಸ ಕೊಡುಗೆಯನ್ನು ಟಿ.ವಿ.ಯಲ್ಲಿ ಜಾಹೀರಾತು ಮಾಡಿದ್ದರಂತೆ. ಇದರಂತೆ ಯಾವುದೋ ಸಾಬೂನಿನ 3 ಹೊಸ ಕವಚಗಳನ್ನು ಕೊಟ್ಟರೆ ಮಾತ್ಯಾವುದನ್ನೋ ಉಚಿತವಾಗಿ ಕೊಡಲಾಗುತ್ತಿತ್ತಂತೆ. ಇದನ್ನು ನಂಬಿದ ಬಳಕೆದಾರರು ತಮ್ಮ ಮನೆ ಸಮೀಪದ ಅಂಗಡಿಗೆ ಹೋದಾಗ ಅಲ್ಲಿ ಇವರನ್ನು ತಿರಸ್ಕಾರದಿಂದ ಕಾಣಲಾಯಿತು.

ಅವರು ಈ ಬಗ್ಗೆ ನಮ್ಮ ಟ್ರಸ್ಟ್‌ಗೆ ದೂರು ಸಲ್ಲಿಸಿದರು. ನಾವು ಈ ದೂರನ್ನು ನಮ್ಮ ಬಳಕೆದಾರರ ಚಳುವಳಿ ಪತ್ರಿಕೆಯಲ್ಲಿ ಪ್ರಕಟಿಸಿದೆವು. ಕೆಲವು ತಿಂಗಳ ಬಳಿಕ ನಮಗೆ ಕಂಪೆನಿಯ ವಕೀಲರಿಂದ ನೋಟೀಸು ಬಂತು. ತಮ್ಮ ಕಂಪೆನಿಯ ಸ್ಪಷ್ಟೀಕರಣವನ್ನು ಪ್ರಕಟಿಸಬೇಕೆಂದು ಒತ್ತಾಯ ಪಡಿಸಿದ್ದರು. ಈ ಬಗ್ಗೆ ಹೆಚ್ಚಿನ ತನಿಖೆ ಮಾಡಿದಾಗ ಬಳಕೆದಾರರು ಮಾಡಿದ ತಪ್ಪು ಹೊರಬಂತು. ನಮ್ಮ ಪತ್ರಿಕೆಯಲ್ಲಿ ಈ ಸುದ್ದಿ ಪ್ರಕಟವಾದೊಡನೆ ಗಾದ್ರೆಜ್ ಕಂಪೆನಿಯವರು ತಮ್ಮ ಸ್ಥಳೀಯ ಪ್ರತಿನಿಧಿಯೊಂದಿಗೆ ಸೋಪ್‌ನ ಬಿಲ್ಲೆಯನ್ನು ಬಳಕೆದಾರರಿಗೆ ಕೊಡಲು ಕಳುಹಿಸಿದ್ದರಂತೆ. ಬಳಕೆದಾರರು ಇದನ್ನು ನಿರಾಕರಿಸಿದರು. ಕಂಪೆನಿಯು ತನಗೆ ಕ್ಷಮಾ ಯಾಚನಾ ಪತ್ರ ಕೊಡಬೇಕೆಂದು ದಬಾಯಿಸಿದರು. ಇದಲ್ಲದೆ, ಇದನ್ನು ಬರವಣಿಗೆಯಲ್ಲೂ ಕೊಟ್ಟರು. ಕಂಪೆನಿಯವರು ನಮ್ಮ ಉಚಿತ ಕೊಡುಗೆ ಮೂರು ಹೊರಕವಚಗಳಿಗೆ ಒಂದು ಸಾಬೂನನ್ನು ಕೊಡುವುದು ಮಾತ್ರ. ನಾವು ಬಳಕೆದಾರರಿಗೆ ಕ್ಷಮಾಯಾಚನಾ ಪತ್ರಕೊಡುತ್ತೇವೆಂದು ಯಾವುದರಲ್ಲೂ ಜಾಹೀರಾತು ಮಾಡಿಲ್ಲವೆಂದು ಪಟ್ಟುಹಿಡಿದರು. ಈ ಬಳಕೆದಾರರನ್ನು ನಂಬಿದ ನಾವು ಬೇಸ್ತು ಬಿದ್ದೆವು!

## ಬಾರದ ಸಿಟಿ ಬಸ್ಸು, ತೊಂದರೆಗೀಡಾದ ಬಳಕೆದಾರರು

ಮಂಗಳೂರು ನಗರದಲ್ಲಿ ಓಡಾಡುವ ಸಿಟಿ ಬಸ್ಸೊಂದು ನಿರ್ದಿಷ್ಟವಾದ ಹಾದಿಯಲ್ಲಿ ಓಡಾಡದ ಕಾರಣ, ತಮಗೆ ತೊಂದರೆಯಾಗಿದೆಯೆಂದು ಒಬ್ಬ ಬಳಕೆದಾರರು ನಮ್ಮಲ್ಲಿ ದೂರಿದ್ದರು. ನಾವು ಅವರಿಗೆ ಅದರ ಪರ್ಮಿಟನ್ನು ಸಾರಿಗೆ ಅಧಿಕಾರಿಗಳ ಕಚೇರಿಯಲ್ಲಿ ನೋಡಿದ ಬಳಿಕ, ದೂರು ಸಲ್ಲಿಸಲು ಸೂಚಿಸಿದೆವು.



ಯಥಾ ಪ್ರಕಾರ ದೂರು ಸಲ್ಲಿಸಿದ ಇವರು, ಕೆಲವು ದಿನಗಳ ನಂತರ ಬಂದು ದೂರು ಸಲ್ಲಿಸಿದರೂ ಏನೂ ಪ್ರಯೋಜನವಾಗಲಿಲ್ಲವೆಂದರು. ಅವರಿಂದ ಮತ್ತೊಂದು ದೂರನ್ನು ಪಡೆದು ಈ ಬಗ್ಗೆ ಸಾರಿಗೆ ಅಧಿಕಾರಿಗಳಿಗೂ ಸಂಚಾರ ಪೋಲೀಸರಿಗೂ ತಿಳಿಸಿದೆವು. ಎರಡು ದಿನಗಳೊಳಗೆ ಪೋಲೀಸರು ಈ ದೂರಿನಲ್ಲಿ ಸತ್ಯಾಂಶವಿರುವುದನ್ನು ಕಂಡು, ಬಸ್ಸನ್ನು ವಶಪಡಿಸಿಕೊಂಡರು!





ಇದನ್ನು ಕಂಡ ಬಳಕೆದಾರರು ಗಾಬರಿಯಿಂದ ಓಡಿಬಂದು ಈ ಬಗ್ಗೆ ನಮ್ಮಲ್ಲಿ ತಿಳಿಸಿದರು. ಗಾಬರಿಯಾಗಲು ಕಾರಣವೇನೆಂದು ಕೇಳಿದಾಗ, ಈ ಬಸ್ಸು ಮಾಲಿಕನು ದೊಡ್ಡ ರೌಡಿಗಳ ಗ್ಯಾಂಗಿನ ಮುಖ್ಯಸ್ಥನೆಂದೂ, ತಮಗೆ ಆತ ಹೊಡೆಸುವನೆಂದೂ ತಿಳಿಸಿದರು. ಅದೇ ದಿನ ಮದ್ಯಾಹ್ನ ಆ ಬಸ್ಸಿನ ಮಾಲಿಕ ನನ್ನನ್ನು ಹುಡುಕಿಕೊಂಡು ಬಂದ. ಆಗ ನಾವು ದೂರುಕೊಟ್ಟ ಬಳಕೆದಾರರಿಗೆ ಬರಹೇಳಿದೆವು. ಒಳಬಂದ ಬಳಕೆದಾರರು ಭಯದಿಂದ ಕಂಪಿಸುತ್ತಾ ಆತನನ್ನು ನೋಡಿದೊಡನೆ, "ಅಲ್ಲ ನಮಗೇನೂ ನಿಮ್ಮ ಬಗ್ಗೆ ದೂರು ಇಲ್ಲ"ವೆಂದು ಹೇಳಲು ಆರಂಭಿಸಿದರು. ಆಗ ನಾನು ಆ ಬಸ್ಸು ಮಾಲಿಕನಿಗೆ ನೀವು ರೌಡಿಗಳ ಗ್ಯಾಂಗಿನವರಂತೆ, ಅದಕ್ಕೆ ಇವರು ನಿಮ್ಮನ್ನು ಕಂಡರೆ ಹೆದರುತ್ತಾರೆ ಎಂದು ತಿಳಿಸಿದೆ. ಅದಕ್ಕಾತ ಇಲ್ಲವೆಂದರೂ, ಬಳಕೆದಾರರು ಒಪ್ಪಲೇ ಇಲ್ಲ. ಕೊನೆಗೆ ಅವರ ಮಧ್ಯೆ ಮುಂದೆ ಬಸ್ಸು ಸರಿಯಾದ ದಾರಿಯಲ್ಲೇ ಓಡುವುದೆಂಬ ಒಪ್ಪಂದವಾಯಿತು.

ಆದರೂ, ಬಸ್ಸು ಹಿಂದಿನ ರೀತಿಯಲ್ಲೇ ಓಡಾಡುತ್ತಿತ್ತು. ಬಳಕೆದಾರರು ಮುಂದೆ ದೂರು ಸಲ್ಲಿಸಲಾಗಲಿ, ನಮ್ಮಲ್ಲಿ ಈ ಬಗ್ಗೆ ತಿಳಿಸಲಾಗಲಿ ಬಂದಿಲ್ಲ! ನಮ್ಮಲ್ಲಿ ಕೆಲವರಿಗೆ ಅಷ್ಟೊಂದು ಅಂಜಿಕೆ!

## ಸಾರ್ವಜನಿಕ ಸಾರಿಗೆ ಬಳಕೆದಾರರ ಸಂಘಟನೆ

ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ಉಪಯೋಗಿಸುವ ಬಳಕೆದಾರರನ್ನು ಸಂಘಟಿಸಲು ಹಲವಾರು ರೀತಿಯಿಂದ ನಾವು ಪ್ರಯತ್ನಿಸಿದೆವು. ಸಿಟಿ ಬಸ್ಸು ಬಳಕೆದಾರರನ್ನು ಎಚ್ಚರಿಸಲು, ಆಟೋರಿಕ್ಷಾ ಬಳಕೆದಾರರಿಗೆ ತಮ್ಮ ಹಕ್ಕುಗಳ ಬಗ್ಗೆ ತಿಳಿಸಲು ಕರಪತ್ರಗಳನ್ನು ಹೊರಡಿಸಿದೆವು. ಇದಲ್ಲದೆ, ಈ ವ್ಯವಸ್ಥೆಗಳನ್ನು ಉಪಯೋಗಿಸುವ ಬಳಕೆದಾರರದ್ದೇ ಆದ ಸಂಘಟನೆಯನ್ನು ಆರಂಭಿಸಿದೆವು.

ಇದಕ್ಕಾಗಿ ಒಂದು ಸಮಿತಿಯನ್ನು ರಚಿಸಿದೆವು. ಕೆಲವಾರು ಸಭೆಗಳನ್ನು ಕರೆದೆವು. ಇದರಿಂದಾಗಿ, ಬಳಕೆದಾರರಲ್ಲಿ ಜಾಗೃತಿ ಉಂಟಾಗಬಹುದೆಂದು ಭಾವಿಸಿದೆವು. ಇದರ ಪರಿಣಾಮವಾಗಿ ಸಂಘಟಿಸಲು ಪ್ರಯತ್ನಿಸಿದ ನಮ್ಮ ಟ್ರಸ್ಟ್‌ಗೆ ಬೆದರಿಕೆ ಪತ್ರಗಳು, ಟೆಲಿಫೋನ್ ಕರೆಗಳು ಬರಲಾರಂಭಿಸಿದುವು.

ಈ ವ್ಯವಸ್ಥೆಯನ್ನು ಉಪಯೋಗಿಸುವ ಸಾವಿರಾರು ಬಳಕೆದಾರರಿದ್ದರೂ ನಮ್ಮ ಉದ್ದೇಶ ಸಫಲವಾಗಲಿಲ್ಲ. ಸಿಟಿ ಬಸ್ಸು ಮಾಲಿಕರು ದರ ಏರಿಸುವಾಗ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಸಭೆ ಕರೆಯಲಾಗುತ್ತಿತ್ತು. ಈ ಸಭೆಯಲ್ಲಿ ಬಳಕೆದಾರರ ಪ್ರತಿನಿಧಿಯಾಗಿ ಭಾಗವಹಿಸಿದ ನನಗೂ, ಬಸ್ಸು ಮಾಲಿಕರಿಗೂ ಚರ್ಚೆಗಳು ನಡೆಯುತ್ತಿದ್ದುವು. ನಮ್ಮ ಪ್ರತಿಭಟನೆಯಿದ್ದಾಗ್ಯೂ ದರಗಳು ಏರುತ್ತಿದ್ದವು. ಆದರೆ, ಈ ಸಭೆಯಲ್ಲಿ ಭಾಗವಹಿಸಿದ ಕಾರಣ, ಈ ಬೆಲೆ ಏರಿಕೆಯಲ್ಲಿ ನಮ್ಮದೂ ಪಾತ್ರವಿದೆ, ಎಂಬ ಆಪಾದನೆಯನ್ನು







ಹೊರಿಸಲಾಯಿತು. ಕೆಲವು ಅನಾಮಧೇಯ ಬಳಕೆದಾರರು ನಮ್ಮನ್ನು ಖಂಡಿಸಿ, ಬ್ಯಾನರ್ ಹಾಕಿದರು.

ಪ್ರಾಮಾಣಿಕವಾಗಿ ಬಳಕೆದಾರರ ಹಿತಾಸಕ್ತಿಗಳನ್ನು ರಕ್ಷಿಸಲು ಪ್ರಯತ್ನಿಸಿದರೂ ಇಂತಹ ಅಪಾದನೆಗಳನ್ನು ಕೇಳಬೇಕಾಯಿತು.

## ಪೊಲೀಸರ ಬಗ್ಗೆ ದೂರು ಸ್ವೀಕರಿಸಿದ ಬಳಕೆದಾರರ ವೇದಿಕೆ

ದಕ್ಷಿಣ ಕನ್ನಡದ ಉಪ್ಪಿನಂಗಡಿಯ ಬಳಿಯ ನೆಲ್ಯಾಡಿ ಎಂಬ ಊರಿನ ಶ್ರೀಪದ್ಮನಾಭಶೆಟ್ಟರು ಬಳಕೆದಾರರ ಆಂದೋಲನದಲ್ಲಿ ತೀವ್ರ ಆಸಕ್ತಿಯಿದ್ದವರು. ಅವರು ತಮ್ಮ ಊರಿನ ಬಳಕೆದಾರರನ್ನು ಸಂಘಟಿಸಲು ಬಳಕೆದಾರರ ವೇದಿಕೆಯೊಂದನ್ನು ಆರಂಭಿಸಿದರು. ಅದರಲ್ಲಿ ಇವರದೇ ಊರಿನ ಕೆಲವು ಆಸಕ್ತ ಉತ್ಸಾಹಿ ವ್ಯಕ್ತಿಗಳು ಸೇರಿಕೊಂಡರು.

ಇವರಿಗೆ ಬಂದ ಮೊದಲನೆಯ ದೂರು ಓರ್ವ ಮಹಿಳೆಯದು. ಇವರು ದೂರು ಸಲ್ಲಿಸಲು ಉಪ್ಪಿನಂಗಡಿಯ ಪೋಲೀಸು ಠಾಣೆಗೆ ಹೋಗಿದ್ದರು. ದೂರನ್ನು ತೆಗೆದುಕೊಳ್ಳಲು ಅಲ್ಲಿಯವರು ನಿರಾಕರಿಸಿದ ಕಾರಣ, ಬಳಕೆದಾರರ ವೇದಿಕೆಗೆ ಬಂದಿದ್ದರು. ಬಳಕೆದಾರರ ವೇದಿಕೆಯವರು ಈ ಮಹಿಳೆಯಿಂದ ದೂರನ್ನು ಪಡೆದು, ಅದರ ಯಥಾಪ್ರತಿ ಬಳಕೆದಾರರ ವೇದಿಕೆಗೆಂದು ಬರೆಸಿ, ಮತ್ತೊಮ್ಮೆ ಪೋಲೀಸರಿಗೆ ದೂರು ಸಲ್ಲಿಸಲು ಹೇಳಿದರು. ಆಗ ಅಲ್ಲಿದ್ದ ಕಾನಸ್ಟಬೇಲ್ಲೊಬ್ಬ ತನ್ನ ಚಪ್ಪಲಿಯಿಂದ ಆ ದೂರಿನ ಪ್ರತಿಗೆ ಹೊಡೆದು, ಆ ಮಹಿಳೆಯನ್ನು ಮತ್ತೆ ನಿಂದಿಸಿ, ಹೊರಗೆ ಕಳುಹಿಸಿದ.

ಬಳಕೆದಾರರ ವೇದಿಕೆಯವರು ಈ ದೂರನ್ನು ಹಿಂಬಾಲಿಸಿ ಕಾರ್ಯೋನ್ಮುಖರಾದಾಗ ಈ ಪೊಲೀಸಲು ಅವರ ಮೇಲೆಯೇ ಸುಳ್ಳು ತಕ್ರೀರುಗಳನ್ನು ದಾಖಲಿಸಲು ಆರಂಭಿಸಿದರು. ಸಂಚಾಲಕರ ಮೇಲೆ ತಹಶೀಲ್ದಾರರಲ್ಲಿ ದೂರು ಸಲ್ಲಿಸಿ ಅವರನ್ನು ಗಡೀಪಾರುಮಾಡುವ ಪ್ರಯತ್ನವೂ ನಡೆಯಿತು. ಅವರು ಕೊನೆಗೆ ಸೆಷನ್ಸ್ ನ್ಯಾಯಾಲಯದಲ್ಲಿ ದಾವೆ ಹೂಡಿದಾಗ, ಈ ಆಜ್ಞೆ ರದ್ದಾಯಿತು. ಒಟ್ಟಿನಲ್ಲಿ ಪೊಲೀಸರು ವೇದಿಕೆಯ ಧ್ವನಿಯನ್ನು ಮಟ್ಟ ಹಾಕಲು ಹಲವಾರು ಪ್ರಯತ್ನಗಳನ್ನು ನಡೆಸಿದರೂ ಅವು ಫಲಕಾರಿಯಾಗಲಿಲ್ಲ.

## ದೂರು ಪಡೆದ ಸಂಚಾಲಕನ ಮೇಲೆ ಹಲ್ಲೆ

ಮಂಗಳೂರಿನ ಬಳಿ ಕಿನ್ನಿಗೋಳಿಯೆಂಬ ಊರಿದೆ. ಇಲ್ಲಿಯ ಬಳಕೆದಾರರ ವೇದಿಕೆಯ ಸಂಚಾಲಕರ ಅನುಭವವೂ ಉಲ್ಲೇಖನೀಯ. ಸ್ಥಳೀಯ ಬಾಲಕನೊಬ್ಬ ಹಲವಾರು ಮಂದಿ ವಿದ್ಯಾರ್ಥಿನಿಯರ ಮೇಲೆ ದೈಹಿಕ ಆಕ್ರಮಣ ಮಾಡಿದ ದೂರುಗಳು ಇದ್ದುವು. ವ್ಯಾಪ್ತಿಯಲ್ಲಿ ಬರುವ ಪೊಲೀಸುಠಾಣೆಯಲ್ಲಿ ಈ ಬಗ್ಗೆ ದೂರು ಸಲ್ಲಿಸಿದ್ದರೂ, ಅವರು ಅದನ್ನು ಪುರಸ್ಕರಿಸುತ್ತಿದ್ದಿಲ್ಲ. ಕೊನೆಗೆ ಈ ವಿದ್ಯಾರ್ಥಿನಿಯರ







ಹೆತ್ತವರು ಈ ಬಗ್ಗೆ ಬಳಕೆದಾರರ ವೇದಿಕೆಯಲ್ಲಿ ದೂರು ಸಲ್ಲಿಸಿದರು. ವೇದಿಕೆಯ ಸಂಚಾಲಕರು ಈ ದೂರಿನ ಬೆನ್ನು ಹತ್ತಿದರು.

ಇದು ನಡೆದು ಎರಡು ದಿನಗಳು ಕಳೆಯುವದರೊಳಗೆ ಆಪಾದಿತ ವ್ಯಕ್ತಿ ಈ ಬಾರಿ ಸಂಚಾಲಕರ ಮೇಲೆ ಕೈ ಮಾಡಿದ. ತನ್ನ ಮೇಲೆ ದೂರನ್ನು ಯಾಕೆ ಸ್ವೀಕರಿಸಿದ್ದು ಎಂಬುದೇ ಆತನ ಆಕ್ಷೇಪವಾಗಿತ್ತು! ಈ ಬಗ್ಗೆ ಅವರು ಮತ್ತೆ ಪೊಲೀಸು ಠಾಣೆಯಲ್ಲಿ ದೂರು ಸಲ್ಲಿಸಿದಾಗಲೂ, ಪೊಲೀಸರು ಆತನ ಪಕ್ಷವನ್ನೇ ವಹಿಸಿದರು. ಕೊನೆಗೆ ಮೇಲಧಿಕಾರಿಗಳಲ್ಲಿ ಈ ಬಗ್ಗೆ ದೂರು ಸಲ್ಲಿಸಲಾಯಿತು. ಆಗಲೂ ಪ್ರತಿಕ್ರಿಯೆ ಇಲ್ಲದ ಕಾರಣ ಇದನ್ನು ಪತ್ರಿಕೆಗಳಲ್ಲಿ ಪ್ರಕಟಿಸಲಾಯಿತು. ಮರುದಿನವೇ ಪೊಲೀಸರು ಕಾರ್ಯೋನ್ಮುಖರಾಗಿ ಈತನನ್ನು ಬಂಧಿಸಿದರು.

## ಬಳಕೆದಾರರ ಸಂಘಟನೆಗಳಿಗೆ ಮಾರ್ಗದರ್ಶಿ ಸೂತ್ರಗಳು.

ಬಳಕೆದಾರರನ್ನು ಸಂಘಟಿಸಲು ಬಯಸುವವರು ಕೆಲವು ಸ್ಥೂಲವಾದ ನೀತಿಗಳನ್ನು ಪಾಲಿಸುವುದು ಅಗತ್ಯವಾಗುತ್ತದೆ. ಮಾರ್ಗದರ್ಶನ ಪಡೆಯುವ ಬಳಕೆದಾರರ ಹಾಗೂ ಪೂರೈಕೆದಾರರ ವಿಶ್ವಾಸ ಪಡೆಯಲು ಇವುಗಳನ್ನು ಅನುಸರಿಸುವುದು ಅಗತ್ಯ.

1. ವೈಯಕ್ತಿಕ ದೂರುಗಳನ್ನು ಸಂಬಂಧ ಪಟ್ಟವರೇ ಸಲ್ಲಿಸಬೇಕು.
2. ಪತ್ರಿಕೆಗಳಲ್ಲಿ ಪ್ರಕಟಿಸುವ ಮೊದಲು ಅಥವಾ ಕೈಗೆತ್ತಿಕೊಳ್ಳುವ ಪ್ರತಿಯೊಂದು ದೂರಿನಲ್ಲಿರುವ ಸಾಕ್ಷ್ಯಾಧಾರ ಇತ್ಯಾದಿಗಳನ್ನು ಪರಾಂಬರಿಸಬೇಕು.
3. ಬೆದರಿಕೆಗಳಿಗೆ ಬಗ್ಗದೆ, ಅಧಿಕಾರಿಗಳಿಗೆ ಹೆದರದೆ ಧೈರ್ಯವಾಗಿ ಮುನ್ನಡೆಯುವ ಬಲವಿದ್ದವರು ನಾಯಕತ್ವವಹಿಸಬೇಕು.
4. ಬಳಕೆದಾರರು ದೂರು ಸಲ್ಲಿಸಿದಾಗ, ಸಂಬಂಧಪಟ್ಟ ಪೂರೈಕೆದಾರರು ರಾಜಿಗೆ ಬಂದಲ್ಲಿ ಅವರವರಿಗೆ ಸೂಕ್ತವೆನಿಸುವ ಒಪ್ಪಂದವನ್ನು ಮಾಡಲು ಬಿಡಬೇಕು.
5. ಯಾವುದೇ ಸಂದರ್ಭದಲ್ಲಿ ಬಳಕೆದಾರರ ಆಂದೋಲನದ ಕಾರ್ಯಕರ್ತರು ಪೂರೈಕೆದಾರರಿಂದ ಹಣ ಅಥವಾ ಇತರ ಯಾವುದೇ ಬಹುಮಾನ, ವಸ್ತುಗಳನ್ನು ಸ್ವೀಕರಿಸಬಾರದು.
6. ಖರ್ಚನ್ನು ಮಾತ್ರ ದೂರು ಸಲ್ಲಿಸಿದ ಬಳಕೆದಾರರಿಂದ ಪಡೆಯಬಹುದು. ಅವರಿಂದ ಇತರ ಯಾವುದೇ ರೀತಿಯ ಪ್ರತಿಫಲವನ್ನು ಅಪೇಕ್ಷಿಸಬಾರದು.
7. ಆಂದೋಲನದ ಮುಂದಾಳುಗಳ, ಸದಸ್ಯರ ಇತಿ–ಮಿತಿಗಳನ್ನು ಮನವರಿಕೆ ಮಾಡಿಕೊಂಡ ಬಳಿಕವೇ ದೂರುಗಳನ್ನು ಕೈಗೆತ್ತಿಕೊಳ್ಳಬೇಕು.







# ಭ್ರಷ್ಟಾಚಾರ, ಬಳಕೆದಾರರ ನಿರಾಕರಣೆ ಮತ್ತು ಆಂದೋಲನ

ಬಳಕೆದಾರರ ನಿರಾಕರಣೆ (consumer resistance)ಯು ಬಳಕೆದಾರರ ಆಂದೋಲನದ ಕಾರ್ಯವಿಧಾನಗಳಲ್ಲಿ ಒಂದು. ಇದರ ಬಗ್ಗೆ ನಾವು ಸ್ವಲ್ಪ ತಿಳಿದುಕೊಳ್ಳುವುದು ಅಗತ್ಯವಾಗಿದೆ.

ಪೂರೈಕೆದಾರರು ಅಧಿಕ ಲಾಭ ಪಡೆಯಲು ಪ್ರಯತ್ನಿಸಿದಾಗ ಯಾ ಕೊರತೆ ಇರುವ ಪರಿಸ್ಥಿತಿಯ ದುರ್ಲಾಭ ಪಡೆಯಲು ಪ್ರಯತ್ನಿಸಿದಾಗ ಬಳಕೆದಾರರು ಸಂಬಂಧಪಟ್ಟವರಿಗೆ ಪಾಠ ಕಲಿಸಲು ಆ ವಸ್ತುವನ್ನು ಖರೀದಿಸುವುದನ್ನು ನಿಲ್ಲಿಸಿ, ತನ್ಮೂಲಕ ಪೂರೈಕೆದಾರರಿಗೆ ಪಾಠಕಲಿಸಬಹುದು.

ಕೆಲವು ವರ್ಷಗಳ ಹಿಂದೆ ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ಮಾಂಸ. ಹಾಗೂ ಮಾಂಸೋತ್ಪನ್ನಗಳ ಬೆಲೆ ಒಮ್ಮೆಲೇ ಏರಿತು. ಇವುಗಳ ತಯಾರಕರು ಲಾಭ ಹೆಚ್ಚಿಸಿಕೊಳ್ಳುವ ಉದ್ದೇಶದಿಂದ ಇದನ್ನು ಮಾಡಿದರು. ಆಗ, ಅಲ್ಲಿಯ ಬಳಕೆದಾರರು ಇದನ್ನು ತೀವ್ರವಾಗಿ ಪ್ರತಿಭಟಿಸಿದರು. ಮಾಂಸ ಹಾಗೂ ಅದರ ಉತ್ಪನ್ನಗಳನ್ನು ಖರೀದಿಸುವುದನ್ನು ನಿಲ್ಲಿಸಿದರು. ಮಾರುಕಟ್ಟೆ, ಗೋದಾಮುಗಳಲ್ಲಿ ರಾಶಿ ರಾಶಿ ಮಾಂಸ ಉಳಿಯಿತು! ಕೊನೆಗೆ ಇದರ ಬೆಲೆ ಇಳಿಯಲೇಬೇಕಾಯಿತು.

ಮೇಲ್ಕಾಣಿಸಲಾದ ಉದಾಹರಣೆ ಕ್ಷುಲ್ಲಕವೆನಿಸುವಂತಹ ಬಳಕೆದಾರರ ನಿರಾಕರಣೆಯ ಪಾಠ ನಮ್ಮ ಸ್ವಾತಂತ್ರ್ಯ ಆಂದೋಲನದಲ್ಲಿದೆ. ಗಾಂಧೀಜಿಯವರು ವಿದೇಶದಲ್ಲಿ ಸಿದ್ಧವಾದ ವಸ್ತುಗಳನ್ನು ತಿರಸ್ಕರಿಸಲು ದೇಶದ ಎಲ್ಲಾ ನಾಗರಿಕರಿಗೂ ಕರೆ ಕೊಟ್ಟರು. ವಿದೇಶ ನಿರ್ಮಿತ ಬಟ್ಟೆ – ಬರೆಗಳನ್ನು ಬೆಂಕಿ ಹಾಕಿ ಉರಿಸಲಾಯಿತು. ಆಗಿನ ಸ್ವಾತಂತ್ರ್ಯ ಹೋರಾಟಗಾರರು ಖಾದಿ ಬಟ್ಟೆಗಳನ್ನೇ ಧರಿಸಲು ಆರಂಭಿಸಿದರು. ಬ್ರಿಟಿಷ್ ಸರಕಾರವೇ ನಡುಗಿತ್ತು.

ನೆಸ್ಲೇ ಎಂಬ ಕೆಪೆನಿಯು ತನ್ನ ಶಿಶು ಆಹಾರ ಮಾರಾಟದ ಮೂಲಕ ಅಭಿವೃದ್ಧಿಶೀಲ ದೇಶಗಳಲ್ಲಿ ಸಾವಿರಾರು ಮಕ್ಕಳ ಸಾವಿಗೆ ಕಾರಣವಾಗುತಿತ್ತು. ಇದಕ್ಕೆ ಆ ಕಂಪೆನಿಯ ಪ್ರಚಾರಕ್ರಮಮೇ ಕಾರಣ. ಇವರ ಲ್ಯಾಕ್ಟೋಜನ್ ಎಂಬ ಉತ್ಪನ್ನಕ್ಕೆ ಬೇಡಿಕೆ ಹೆಚ್ಚಿಸಲು ಅನೇಕ ವಿಧಾನಗಳನ್ನು ಅನುಸರಿಸುತ್ತಿದ್ದರು. ಇವುಗಳ ಡಬ್ಬಿಗಳನ್ನು ನವತಾಜ ಶಿಶುಗಳ ತಾಯಂದಿರಿಗೆ 'ಧರ್ಮಾರ್ಥ'ವಾಗಿ ಹಂಚಲಾಗುತಿತ್ತು. ಈ





ಬಡವರ್ಗದ ತಾಯಂದಿರು ವಿದೇಶದ ಹಾಲು ಕುಡಿಸಿದರೆ ತಮ್ಮ ಮಗುವೂ ಅಲ್ಲಿಯ ಮಕ್ಕಳಂತೆ ಆಗಬಹುದೆಂಬ ಆಸೆಯಿಂದ ಶಿಶುಗಳಿಗೆ ಅದನ್ನೇ ಕುಡಿಸುತ್ತಿದ್ದರು. ಮೊಲೆ ಹಾಲು ಬತ್ತಿಹೋದಾಗ, ಇವರ ಉತ್ಪನ್ನಕ್ಕೆ ಮುಂದಿನ ಕೆಲವು ತಿಂಗಳುಗಳಿಗೆ ಗಿರಾಕಿ ಹುಟ್ಟಿಸುವುದೇ ಈ ಉಚಿತ ಕೊಡುಗೆಯ ಕುತಂತ್ರ! ಮುಂದೆ, ಮಗು ಬೆಳೆದಂತೆ ಅದಕ್ಕೆ ಬೇಕಾಗುವ ಆಹಾರದ ಪ್ರಮಾಣವೂ ಹೆಚ್ಚುವಾಗ, ಹಣಹೊಂದಿಸಲು ಕಷ್ಟವಾಗುವ ಪರಿಸ್ಥಿತಿಯಲ್ಲಿದ್ದ ಈ ಮಹಿಳೆಯರು, ಹಾಲಿನ ಹುಡಿಯನ್ನು ಕಡಿಮೆ ಹಾಕಿ, ನೀರಿನ ಪ್ರಮಾಣವನ್ನು ಹೆಚ್ಚಿಸುತ್ತಿದ್ದರು. ತತ್ಕಾರಣ, ಮಗುವಿಗೆ ಸಿಗುವ ಪೌಷ್ಟಿಕಾಂಶಗಳ ಕೊರತೆಯಾಗುತ್ತಿತ್ತು. ಇದಲ್ಲದೆ, ಆ ಶುದ್ಧನೀರಿನಿಂದಾಗಿ ಮಗುವಿಗೆ ವಾಂತಿ ಭೇದಿ! ಇದರಿಂದಾಗಿ ಸಾವಿರಾರು ಮಕ್ಕಳು ಸಾಯುತ್ತಿದ್ದರು.

ಇಂತಹ ಕುತಂತ್ರಗಳನ್ನು ನಡೆಸುವ ನೆಸ್ಲೆ ಕಂಪೆನಿಯ ವಿರುದ್ಧ ಯುರೋಪಿನ ಕೆಲವು ಬಳಕೆದಾರರ ಸಂಘಟನೆಗಳು ಸಮರ ಸಾರಿದುವು. ಮಕ್ಕಳ ಕೊಲೆಗಡುಕ ನೆಸ್ಲೆಯ ಯಾವುದೇ ತಯಾರಿಕೆಯನ್ನು ಖರೀದಿಸಬೇಡಿಯೆಂದು ಪ್ರಚಾರಮಾಡತೊಡಗಿದರು. ನೆಸ್ಲೆಯ ಮಾರಾಟದ ಆದಾಯವು ಕಡಿಮೆಯಾಯಿತು. ಮತ್ತೆ, ಈ ಕಂಪೆನಿಯು ಮಗುವಿನ ಆಹಾರದ ಪ್ರಚಾರವನ್ನು ಕೈಬಿಟ್ಟಿತು.

ಇದೇ ರೀತಿಯಲ್ಲಿ ತಯೋಕ್ವಿನಾಲ್‌ನ ಭೇದಿಶಮನಕಾರಿ ಮಾತ್ರೆಗಳನ್ನು ಮಾರಾಟ ಮಾಡಿ ಕೆಲವು ಸಾವಿರ ಬಳಕೆದಾರರು ದೃಷ್ಟಿಹೀನರಾಗುವಂತೆ ಮಾಡಿದ ಸೀಬಾ – ಗೈಗಿ ಕಂಪೆನಿಯ ಮೇಲೂ ಇದೇ ರೀತಿ ಬಹಿಷ್ಕಾರ ಪರಿಣಾಮ ಬೀರಿತು. ಈ ಮಾತ್ರೆಗಳ ಮಾರಾಟವನ್ನು ನಿಲ್ಲಿಸಿದರು. ಆದರೆ, ಭಾರತದಲ್ಲಿ ಒಮ್ಮೆ ನಿಷೇಧಿಸಲಾದ ಈ ಮಾತ್ರೆಗಳು ಮತ್ತೆ ಮಾರುಕಟ್ಟೆಗೆ ಬಂದಿವೆ. 'ಇದರ ದುಷ್ಪರಿಣಾಮಗಳಿಗೆ ಬಲಿಯಾಗಿ ತೊಂದರೆಗೀಡಾಗುವ ವ್ಯಕ್ತಿಗಳಿಗಿಂತಲೂ, ವಾಂತಿ–ಭೇದಿಗಳಿಂದಾಗಿ ಸಾಯುವ ವ್ಯಕ್ತಿಗಳ ಸಂಖ್ಯೆ ಹೆಚ್ಚಿದೆ!' ಎಂದು ಕಾರಣ ನೀಡಲಾಗಿದೆ.

ಈ ಪುಸ್ತಕವನ್ನು ಬರೆಯುತ್ತಿದ್ದಾಗ, (1994, ಆಗಸ್ಟ್) ನಮ್ಮ ದೇಶದಲ್ಲಿ ಕಾಫಿ ಹುಡಿಯ ಬೆಲೆ ಗಗನಕ್ಕೇರಿದೆ. ಕಾಫಿ ಜೀವನಾವಶ್ಯಕ ವಸ್ತುವೆ? ಇದಿಲ್ಲದಲ್ಲಿ ಬದುಕಲು ಸಾಧ್ಯವಿಲ್ಲವೆ? ಬೇರೆ ಪಾನೀಯಗಳಿಲ್ಲವೆ? ಎಂಬುದನ್ನು ಬಳಕೆದಾರರು ಆಲೋಚಿಸಬೇಕಾಗಿದೆ. ಬಳಕೆದಾರರ ನಿರಾಕರಣದ ಮೂಲಕ ಈ ಬೆಲೆ ಏರಿಕೆಗೆ ಕಡಿವಾಣ ಹಾಕಬೇಕಾಗಿದೆ.

ಬಳಕೆದಾರರ ನಿರಾಕರಣೆ ಬಳಕೆದಾರರ ಆಂದೋಲನದ ಮುಖ್ಯವಾದ ಅಸ್ತ್ರಗಳಲ್ಲೊಂದು. ಇದರ ಉಪಯೋಗದಿಂದ ಲಾಭಕೋರರಿಗೆ ಪಾಠ ಕಲಿಸಲು ಸಾಧ್ಯವಿದೆ. ಆದರೆ, ನಿರಾಕರಣೆಗೆ ಬಳಕೆದಾರರಲ್ಲಿ ಒಗ್ಗಟ್ಟು ಮುಖ್ಯ. ಇದು ಇದ್ದಲ್ಲಿ ಬಲಶಾಲಿ, ಪ್ರಭಾವಶಾಲಿ ಪೂರೈಕೆದಾರರನ್ನು ಮಣಿಸಲು ಸಾಧ್ಯವಿದೆ.





### ಭ್ರಷ್ಟಾಚಾರವನ್ನು ಹೋಗಲಾಡಿಸಲು ಸಾಧ್ಯವೆ?

ಭ್ರಷ್ಟಾಚಾರವನ್ನು ಬಳಕೆದಾರರ ಆಂದೋಲನದ ಮೂಲಕ ಹೋಗಲಾಡಿಸಲು ಸಾಧ್ಯವೇ ಎಂಬ ಪ್ರಶ್ನೆಬರುತ್ತದೆ. ಭ್ರಷ್ಟಚಾರ ನಿರ್ಮೂಲನವು ಬಳಕೆದಾರರ ಆಂದೋಲನದ ನೇರವಾದ ಉದ್ದೇಶವಲ್ಲವಾದರೂ ಕೆಲವೊಮ್ಮೆ ಅದು ಸಾಧ್ಯವಿದೆ.

ಉದಾಹರಣೆಗೆ ಸರಕಾರಿ ಕಚೇರಿಗೆ ಹೋಗುವ ಬಳಕೆದಾರರಿಗೆ ತಮ್ಮ ಹಕ್ಕುಗಳ ಬಗ್ಗೆ ಸರಿಯಾದ ತಿಳುವಳಿಕೆ ಇದ್ದಲ್ಲಿ, ಅವರನ್ನು ಅಲ್ಲಿಯ ಅಧಿಕಾರಿಗಳು ಶೋಷಿಸಲು ಸಾಧ್ಯವಿಲ್ಲ. ಇದೇ ರೀತಿಯಲ್ಲಿ ಸರದಿಯಲ್ಲಿದ್ದ ಎಲ್ಲಾ ಬಳಕೆದಾರರು ಜಾಗ್ರತೆಯಿಂದಿದ್ದಲ್ಲಿ ಸರದಿ ತಪ್ಪಿಸಿ ಅಥವಾ ನಿಯಮಗಳನ್ನು ಕಡೆಗಣಿಸಿ ಯಾರಿಗಾದರೂ ಅನಗತ್ಯ ಒಲವು ತೋರಿಸುವುದು ಸಾಧ್ಯವಿಲ್ಲ.

ಇದೇ ರೀತಿಯಲ್ಲಿ ಬಳಕೆದಾರರು ಒಂದಾಗಿ ಯಾವುದೇ ರೀತಿಯ ಅಕ್ರಮ ಸಂಭಾವನೆ ಅಥವಾ ಲಂಚವನ್ನು ಕೊಡುವುದಿಲ್ಲವೆಂದು ನಿರ್ಧರಿಸಿದಲ್ಲಿ ಭ್ರಷ್ಟಾಚಾರ ನಿರ್ಮೂಲನವು ಸಾಧ್ಯ.

ಆದರೆ, ನಮ್ಮ ಪರಿಸ್ಥಿತಿಯನ್ನು ಗಮನಿಸಿದಾಗ ಇದು ಸಾಧಿಸಲು ಅಸಾಧ್ಯವೆಂದು ಕಂಡುಬರುತ್ತಿದೆ.





# ಬಳಕೆದಾರರಿಗಿರುವ ಮಾನಸಿಕ ತಡೆಗಳು

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿ ಸುಮಾರು ಅರ್ಧ ಶತಕದಷ್ಟು ವರ್ಷವಾಗುತ್ತಾ ಬಂದಿದ್ದರೂ, ನಾವು ಇನ್ನೂ ದಾಸ್ಯದಡಿಯಲ್ಲಿದ್ದೇವೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳು ಪ್ರಭುಗಳೆಂದು ನಾಮಮಾತ್ರಕ್ಕೆ ಇದ್ದರೂ ನಮ್ಮ ಹಣದಿಂದ ಸಂಬಳ ಪಡೆಯುವ ಸರಕಾರಿ ನೌಕರರು ತಾವೇ ಪ್ರಭುಗಳಂತೆ ವರ್ತಿಸುತ್ತಾರೆ. ಚುನಾಯಿತರಾದ ರಾಜಕಾರಣಿಗಳು ಗೂಂಡಾಗಿರಿ, ದಬ್ಬಾಳಿಕೆ, ಶೋಷಣೆಯಲ್ಲಿ ತೊಡಗುತ್ತಾರೆ. ಇದನ್ನು ಪ್ರತಿಭಟಿಸಿ ಸಾಮಾನ್ಯ ಬಳಕೆದಾರರ ಅಥವಾ ದೇಶದ ಪ್ರಜೆ ಸಿಡಿದೇಳುವುದಿಲ್ಲವೇಕೆ? ಈ ಬಗ್ಗೆ ಉಡುಪಿಯ ಬಳಕೆದಾರರ ಆಂದೋಲನದ ಕಾರಣಕರ್ತರೂ, ಖ್ಯಾತ ಮನೋರೋಗ ತಜ್ಞರೂ ಆದ ಡಾ. ಕೆ. ಪಿ. ಎಸ್. ಕಾಮತರು ವಿಶ್ಲೇಷಿಸಿದ್ದಾರೆ. ಅವರ ಲೇಖನದಿಂದಲೂ, ನನ್ನ ವೈಯಕ್ತಿಕ ಅನುಭವದಿಂದಲೂ ನಮ್ಮನ್ನು ಕಾರ್ಯೋನ್ಮುಖರಾಗದೆ ತಡೆದು ನಿಲ್ಲಿಸುವ ಅಂಶಗಳನ್ನು ಗಮನಿಸಿದ್ದೇನೆ. ಇವುಗಳ ವಿವರಣೆ ಕೆಳಗಿದೆ.

## 1. ನಮ್ಮ "ವೈಭವಪೂರ್ಣ" ಇತಿಹಾಸ :

ನಮ್ಮ ದೇಶದ ಇತಿಹಾಸವು ಮಕ್ಕಳಲ್ಲಿ ಚಿಕ್ಕ ವಯಸ್ಸಿನಿಂದಲೂ ಕೆಲವು ಮಾನಸಿಕ ತಡೆಗಳನ್ನು ತಂದೊಡ್ಡುವುದಕ್ಕೆ ಕಾರಣವಾಗಿದೆ. ಈ ಗುಣಗಳು ರಕ್ತಗತವಾಗಿಯೇ ಬಂದಿವೆಯೆನ್ನಬಹುದು.

ಇದರಲ್ಲಿ ಮುಖ್ಯವಾಗಿರುವುದು ಅಧಿಕಾರದಲ್ಲಿರುವವರ ಬಗ್ಗೆ ಅಂಜಿಕೆ. ಹಿಂದಿನ ಕಾಲದಲ್ಲಿ ನಮ್ಮನ್ನು ರಾಜರು ಆಳುತ್ತಿದ್ದರು. ಇವರ ಕೆಳಗೆ ಜಮೀನುದಾರರು, ಪಾಳೆಗಾರರು ಇದ್ದರು. ಇವರೆಲ್ಲರೂ ತಮ್ಮ ಅಂತಸ್ತಿಗೆ ತಕ್ಕ ಭೋಗಜೀವನವನ್ನು ನಡೆಸುತ್ತಿದ್ದರು. ಸಾಮಾನ್ಯ ಮನುಷ್ಯನ ಪರಿಸ್ಥಿತಿ ಅತ್ಯಂತ ಚಿಂತಾಜನಕವಾಗಿತ್ತು. ಇವರ ಭೋಗಜೀವನಕ್ಕೆ, ಆಗಾಗ ನಡೆಯುವ ಯುದ್ಧಗಳಿಗೆ ಬೇಕಾದ ಸಂಪನ್ಮೂಲಗಳು ಈ ಜನ ಸಾಮಾನ್ಯರ ದುಡಿಮೆಯಿಂದಲೇ ಬರಬೇಕಾಗಿತ್ತು. ಪರಿಸ್ಥಿತಿ ಹೀಗಿರುವಾಗ ಜನ ಸಾಮಾನ್ಯನು ಸಮಾನತೆ ಕೇಳಿದರೆ, ಇವರನ್ನು ಪ್ರಶ್ನಿಸಿದರೆ ಸಾಮಾಜಿಕ ವ್ಯವಸ್ಥೆಯೇ ಬದಲಾಗಬೇಕಾಗಿತ್ತು. ತತ್ಕಾರಣ, ಇಂತಹ ಪ್ರಶ್ನಿಸುವ ಪ್ರವೃತ್ತಿಯನ್ನು ಕಟ್ಟುನಿಟ್ಟಾಗಿ ನಿಯಂತ್ರಿಸಲಾಗುತ್ತಿತ್ತು. ಯಾರಾದರೊಬ್ಬ ಚಕಾರವೆತ್ತಿದರೆ ಆತನ ರುಂಡ-ಮುಂಡಗಳು ಬೇರೆಯಾಗುತ್ತಿದ್ದುವು.







ಪರಿಸ್ಥಿತಿ ಹೀಗಿರುವಾಗ ತಂದೆ ತಾಯಂದಿರಿಗೆ ತಮ್ಮ ಮಕ್ಕಳ ಪ್ರಾಣಸುರಕ್ಷಿತವಾಗಿರುವುದೇ ಮುಖ್ಯವಾಗಿತ್ತು. ತತ್ಕಾರಣ, ಅಧಿಕಾರದಲ್ಲಿರುವವರಿಗೆ ಬಗ್ಗಿ ನಡೆಯಲು ಚಿಕ್ಕವಯಸ್ಸಿನಿಂದಲೇ ಮಕ್ಕಳಿಗೆ ತರಬೇತಿ ನೀಡಲಾಗುತ್ತಿತ್ತು. ಪ್ರಶ್ನಿಸಿದರೆ, 'ನಿನಗ್ಯಾಕೋ ಅಧಿಕಪ್ರಸಂಗ'' ಎಂದು ಮಕ್ಕಳಿಗೆ ಚಿಕ್ಕವಯಸ್ಸಿನಿಂದಲೂ ದಬಾಯಿಸಿದರೆ, ಅವರು ಪ್ರಶ್ನಿಸುವುದನ್ನೇ ನಿಲ್ಲಿಸುತ್ತಾರೆ. ಇದಲ್ಲದೆ, ನಾಯಿ ಬೊಗಳಿದರೆ ದೇವಲೋಕ ಹಾಳೆ?, ನಾಯಿಗೆ ಯಾಕೆ ದೇವರಮಂಚದ ಚಿಂತೆ? ಮುಂತಾದ ಗಾದೆಗಳಿಂದಲೂ ಜನ ಸಾಮಾನ್ಯರು ದೊಡ್ಡವರ ಬಗ್ಗೆ ಪ್ರಶ್ನಿಸದಂತೆ ತಡೆಗಳಾಗುತ್ತವೆ.

ಮುಂದೆ, ಈ ಪಾಳೆಯಗಾರ/ರಾಜ, ಮಹಾರಾಜರುಗಳು ಆಳಿದರು. ಆ ಸ್ಥಾನಕ್ಕೆ ಬ್ರಿಟಿಷರು ಬಂದರು. ಅವರದ್ದೂ ಪ್ರವೃತ್ತಿ ಇದೇ ಆಗಿತ್ತು. ಉದ್ದೇಶಗಳು ಮಾತ್ರ ಬೇರೆ. ಭಾರತದ ಸಂಪನ್ಮೂಲಗಳನ್ನು ತಮ್ಮ ದೇಶಗಳಿಗೆ ಸಾಗಿಸುವುದು! ಆದರೆ, ಈ ಸಮಯದಲ್ಲೂ ಪ್ರಶ್ನಿಸುವ ಪ್ರವೃತ್ತಿಯನ್ನು ಹತ್ತಿಕ್ಕಲಾಯಿತು.

1947ರಲ್ಲಿ ಬ್ರಿಟಿಷರು ಭಾರತ ಬಿಟ್ಟು ತೊಲಗಿದರು. ಆಗ ಅವರ ಸ್ಥಾನವನ್ನು ಸರಕಾರಿ ಅಧಿಕಾರಿಗಳು, ಆಳುವ ಪಕ್ಷಗಳು ವಶಪಡಿಸಿಕೊಂಡವು. ಈಗಲೂ ಪ್ರಶ್ನಿಸುವ ಪ್ರವೃತ್ತಿಯನ್ನು ಸಾಕಷ್ಟು ಮಟ್ಟಿಗೆ ಹತ್ತಿಕ್ಕಲಾಗುತ್ತದೆ. ತಮ್ಮ ಪಕ್ಷದವರು ತಪ್ಪು ಮಾಡುವುದು ಸಾಧ್ಯವೇ ಇಲ್ಲವೆಂಬಂತೆ ವರ್ತಿಸುವುದು ಆಳುವ ಪಕ್ಷದ ರಾಜಕಾರಣಿಗಳಿಗೆ ಅಗತ್ಯ. ವಿರೋಧ ಪಕ್ಷಗಳದ್ದು ತದ್ವಿರುದ್ಧ ಅಭಿಪ್ರಾಯ. ಸರಕಾರಿ ನೌಕರರು ಅಧಿಕಾರದಲ್ಲಿರುವ ಪಕ್ಷದ ಪರ! ಒಟ್ಟಿನಲ್ಲಿ ಜನ ಸಾಮಾನ್ಯನಿಗೆ ಪ್ರಶ್ನಿಸುವ ಹಕ್ಕು ಇಲ್ಲ. ಈಗ ದಮನ ಹಿಂದಿನಷ್ಟು ನೇರ, ಕ್ರೂರವಾದ ವಿಧಾನಗಳಿಂದಲ್ಲವಾದರೂ ನಡೆಯುತ್ತಲೇ ಇದೆ.

ಈ ಆಳುವ ಪಕ್ಷ/ ರಾಜ ಮಹಾರಾಜರುಗಳು ಆಗಾಗ ಜನರನ್ನು ತಮ್ಮ ನೈಜ ಪರಿಸ್ಥಿತಿಯಿಂದ ದೂರ ಎಳೆಯಲು ಪ್ರಯತ್ನಮಾಡುವುದುಂಟು. ನಮ್ಮ ದೂರದರ್ಶನ/ ಆಕಾಶವಾಣಿ / ಸರಕಾರಿ ಕೃಪಾ ಪೋಷಿತ ನಾಟಕ ಮಂಡಳಿಗಳೆಲ್ಲವೂ ಈ ನಿಟ್ಟಿನಲ್ಲಿ ಪ್ರಯತ್ನಗಳಾಗಿವೆ. ಹಿಂದಿನ ಕಾಲದ ರಾಜಮಹಾರಾಜರುಗಳು ಶಿಲ್ಪಕಲೆ, ನೃತ್ಯ, ಗಾಯನ ಧರ್ಮಸಂಸ್ಥೆ ಮುಂತಾದವುಗಳಿಗೆ ಪ್ರೋತ್ಸಾಹ ಕೊಡುತ್ತಿದ್ದದ್ದು ಇದೇ ಕಾರಣಗಳಿಗಾಗಿ. ಜನ ಸಾಮಾನ್ಯರಿಗೆ ಅಗತ್ಯವಾಗಿರುವ ನಮ್ಮ ಆಂದೋಲನಕ್ಕೆ ಸಿಗುವ ಹಿತಾಸಕ್ತಿಗಳ ಬಗ್ಗೆ ಸಭೆ ಕರೆದರೆ ಇವತ್ತೂ ಬರುವುದು ಬೆರಳೆಣಿಕೆಯಷ್ಟು ಜನ. ಅದೇ, ಒಂದು ಸಿನಿಮಾದಲ್ಲಿ ಚಿಕ್ಕ ಪಾತ್ರವಹಿಸಿದ ವ್ಯಕ್ತಿ ಬಂದರೂ ಅಲ್ಲಿ ಸಾವಿರಾರು ಮಂದಿ!







ಒಟ್ಟಿನಲ್ಲಿ ನಮ್ಮ ಐತಿಹಾಸಿಕ ಪರಂಪರೆ ಒಂದು ದೊಡ್ಡ ಮಾನಸಿಕ ತಡೆ!

## 2. ಬೆಳೆದುಬಂದ ಪರಿಸರ :

ನಾವು ಬೆಳೆದು ಬಂದ ಪರಿಸರವು ಚಿಕ್ಕ ವಯಸ್ಸಿನಲ್ಲೇ ನಮ್ಮ ಧೋರಣೆಗಳನ್ನು ರೂಪಿಸುತ್ತದೆ. ಚಿಕ್ಕವಯಸ್ಸಿನಲ್ಲೇ ಸರಕಾರಿ ನೌಕರನಾದ ತನ್ನ ತಂದೆ ಲಂಚವನ್ನು ಪಡೆದುಕೊಳ್ಳುವುದನ್ನು ನೋಡಿದ ಮಗು, ಲಂಚವು ಅಕ್ರಮ ಸಂಭಾವನೆಯೆಂದೇ ತಿಳಿಯುವುದಿಲ್ಲ! ಇದಕ್ಕೆ 'ಮಾಮೂಲು' ಅಥವಾ ಪದ್ಧತಿಯ ಪ್ರಕಾರವೇ ಸಿಗುವುದು ಎಂದೂ ಹೇಳಲಾಗುತ್ತದೆ.

ಶೌಚಾಲಯಗಳೇ ಇಲ್ಲದ ಊರಿನಲ್ಲಿ ಬೆಳೆದ ಮಗುವಿಗೆ ಮನೆಯ ಎದುರಿನ ಚರಂಡಿಯಲ್ಲೇ ಮಲ–ಮೂತ್ರ ವಿಸರ್ಜನೆ ಮಾಡುವುದು ಸಾಮಾನ್ಯ ಪದ್ಧತಿ. ಇದೇ ಮಗು ಮುಂದೆ ಬೆಳೆದು ಮಹಾನಗರ ಪಾಲಿಕೆಯ ಆರೋಗ್ಯಾಧಿಕಾರಿಯಾದರೆ ಇಂತಹವುಗಳ ಬಗ್ಗೆ ಬಳಕೆದಾರರು ದೂರು ಸಲ್ಲಿಸಿದಾಗ ಆಶ್ಚರ್ಯಪಡಬಹುದು! ಯಾಕೆಂದರೆ, ಅಂತಹ ಅಧಿಕಾರಿಗಳ ಮನೋಭಾವದ ಪ್ರಕಾರ ಇದೊಂದು ರೂಢಿಯಲ್ಲಿರುವ ಪದ್ಧತಿ!

ಬೆಳೆಯ ಗುಣ ಮೊಳಕೆಯಲ್ಲಿ ಎಂಬಂತೆ, ಚಿಕ್ಕ ಮಕ್ಕಳೇ ಮುಂದಿನ ಬಳಕೆದಾರರು, ಪ್ರಜೆಗಳು. ಅವರಿಂದ ಕೆಲಸ ಮಾಡಿಸಬೇಕಾದರೆ ಚಿಕ್ಕ ಪುಟ್ಟ ಆಮಿಷಗಳನ್ನು ಕೊಟ್ಟೇ ಮಾಡಿಸುವುದು ಸಾಮಾನ್ಯ. ಮುಂದೆ, ಆ ಮಗು ಬೆಳೆದಾಗ ಇಂತಹವುಗಳನ್ನು ಅಪೇಕ್ಷಿಸುವುದು ಸಹಜ. ಭ್ರಷ್ಟಾಚಾರದ ಆರಂಭ, ಸಮರ್ಥನೆ ಇಲ್ಲಿಯೇ ಆಗುವುದು.

## 3. ಪಲಾಯನವಾದ :

ಕೆಲವೊಮ್ಮೆ ಬಳಕೆದಾರರು ನಮ್ಮಲ್ಲಿ ಬರುವುದುಂಟು. ನಿಮಗೆ ಭಾರಿ ಒಳ್ಳೆಯ ಕೇಸನ್ನು ತಂದಿದ್ದೇನೆ ಎಂಬುದೇ ಅವರ ಉಲ್ಲೇಖ. ಪ್ರಾಯಶಃ, ನಾವು ವಕೀಲರಂತೆ ಕೇಸುಗಳನ್ನು ಸ್ವೀಕರಿಸಿ ಹಣ ಪಡೆಯುವವರೆಂದು ಅವರು ತಿಳಿದಿರಬಹುದು. ಯಾಕೆ ಎಂದು ಪ್ರಶ್ನಿಸಿದಾಗ, ಆ ವಿಷಯದ ಬಗ್ಗೆ ಹೆಚ್ಚಿನ ವಿವರಣೆಗಳು ಬರುತ್ತವೆ. ಆಗ, ನಾವು ಸಂಬಂಧ ಪಟ್ಟವರೇ ದೂರು ಸಲ್ಲಿಸಬೇಕೆಂದಾಗ ಇವರ ಉತ್ಸಾಹ ಮಾಯ!

ಪಲಾಯನವಾದಕ್ಕೆ ಹಲವಾರು ಸಬೂಬುಗಳಿರುತ್ತವೆ. ಒಂದು ಏನೆಂದರೆ ಅವರಿಗೆ ಸಮಯವಿಲ್ಲವಂತೆ! ಆಗ, ನಾವು ಹೇಳುತ್ತೇವೆ. "ನಮಗೂ ಸಮಯವಿಲ್ಲ" ತಮ್ಮ ಸಮಸ್ಯೆಗಳ ಪರಿಹಾರಕ್ಕೆ ಪ್ರಯತ್ನಿಸಲು ಸಮಯವಿಲ್ಲದವರು ಕೆಲವೊಮ್ಮೆ ಸಿನಿಮಾ ಥೇಟರುಗಳ ಹೊರಗೆ, ಹೋಟೇಲುಗಳಲ್ಲಿ, ಪೂಜೆ ಪುರಸ್ಕಾರಗಳಲ್ಲಿ ಗಂಟೆಗಟ್ಟಲೆ







ಕಾದುಕೂತಿರುವುದನ್ನು ನೋಡಬಹುದು. ಆದರೆ, ತಮ್ಮ ಹಕ್ಕುಗಳಿಗೆ ಹೋರಾಡಲು ಇವರಿಗೆ ಪುರುಸೊತ್ತಿಲ್ಲ.

ಕೆಲವೊಮ್ಮೆ ಇವರಿಗೆ ಪೂರೈಕೆದಾರರ ಭಯವಿರುತ್ತದೆ. ಅವರಿಗೆ ರೌಡಿಗಳ ಗ್ಯಾಂಗು ಇದೆ ಇತ್ಯಾದಿ ಸಬೂಬುಗಳನ್ನು ಕೊಡುತ್ತಾರೆ. ಆ ಸಮಯದಲ್ಲಿ ನಾವೂ ಹೇಳುತ್ತೇವೆ "ಆ ಗ್ಯಾಂಗು ನಮ್ಮನ್ನೂ ಬಂದು ಕೊಲ್ಲಬಹುದು. ನಿಮಗೆ ಬೇಡದ ವಿಷಯ ನಮಗೂ ಬೇಡ".

## 4. ಸಂಕೋಚ ಮನೋವೃತ್ತಿ:

ಪಾಶ್ಚಾತ್ಯರಲ್ಲಿ ಅಪರಾಧಿ ಮನೋಭಾವವಿದೆ (guilt complex). ಜಗತ್ತಿನ ಹೆಚ್ಚಿನ ಜನಸಂಖ್ಯೆ ಹೊಟ್ಟೆಗಿಲ್ಲದೆ ನರಳುತ್ತಿರುವಾಗ ತಾವೆಲ್ಲಾ ಹೊಟ್ಟೆತುಂಬ ತಿಂದು, ಐಷಾರಾಮದ ಜೀವನನಡೆಸುತ್ತೀವೆಂಬ ಅಪರಾಧಿ ಮನೋಭಾವವು ಅವರಲ್ಲಿದೆ. ತದ್ವಿರುದ್ಧವಾಗಿ ನಮ್ಮವರಲ್ಲಿ ಇತರರು ನಮ್ಮನ್ನು ನೋಡಿ ಪರಿಹಾಸ್ಯ ಮಾಡಿ ಎಂಬ ಸಂಕೋಚ ಸ್ವಭಾವವಿದೆ ಈಗಾಗಲೇ ತಿಳಿಸಿರುವಂತೆ ಅಧಿಕಾರದಲ್ಲಿರುವವರ ಅಂಜಿಕೆ, ಭ್ರಷ್ಟಾಚಾರವೇ ಜೀವನ ಕ್ರಮದಂತಿರುವ ಪರಿಸರವಿರುವ ಭಿನ್ನವಾದ ಅಭಿಪ್ರಾಯಕ್ಕಿಂತ ವ್ಯಕ್ತಿ, ತನ್ನ ಹಕ್ಕುಗಳನ್ನು ಪ್ರತಿಪಾದಿಸಲು ಹೊರಟು, ಮುಂದೇನಾದರೂ ಹೆಚ್ಚುಕಡಿಮೆಯಾಗಿ ತೊಂದರೆಗೆ ಸಿಕ್ಕಿಹಾಕಿಕೊಂಡಾಗ, ಉಳಿದವರು ತಮ್ಮನ್ನು ನೋಡಿ ಪರಿಹಾಸ್ಯ ಮಾಡಿಯಾರು ಎಂಬ ಸಂಕೋಚವೇ ಕೆಲವರನ್ನು ತಡೆಯುತ್ತದೆ.

ನಮ್ಮ ಸಂಘಟನೆಯ ಸದಸ್ಯರಲ್ಲೇ ಕೆಲವರು ಸಂಘಟನೆ ಆರಂಭವಾದ ದಿನಗಳಲ್ಲಿ ನನಗೆ ಸೂಚನೆಯಿತ್ತಿದ್ದರು. ಅವರ ಪ್ರಕಾರ "ಅಡುಗೆ ಅನಿಲ, ಟೆಲಿಫೋನ್ ಆಗಲಿ, ಇತರ ಸರಕಾರಿ ಇಲಾಖೆಗಳ ಬಗ್ಗೆ ದೂರುಗಳನ್ನಾಗಲಿ ಎತ್ತಿಕೊಂಡರೆ ತೊಂದರೆಯಿಲ್ಲ. ಆದರೆ, ಪೊಲೀಸರ ಬಗ್ಗೆ ಯಾವುದೇ ದೂರನ್ನು ಸ್ವೀಕರಿಸುವುದು ಬೇಡ". ಯಾಕೆಂದರೆ, ಅವರದ್ದೇ ಶಬ್ದಗಳಲ್ಲಿ "ಎಲ್ಲಾದರೂ ಪೊಲೀಸನು ಬಂದು ಇನ್ಸ್‌ಪೆಕ್ಟರು ಸ್ಟೇಷನಿಗೆ ಬಾ ಎಂದಿದ್ದಾರೆ ಎಂದರೆ ಏನುಮಾಡುವುದು?" ಪೊಲೀಸರ ಬಗ್ಗೆ ಅವರಿಗೆ ಅಷ್ಟು ಅಂಜಿಕೆ! ನಾಳೆ ತಾನು ಪೊಲೀಸು ಸ್ಟೇಷನಿಗೆ ಹೋದದ್ದು ನೋಡಿದರೆ ಇತರರು ಏನೆಂದು ತಿಳಿದಾರು ಎಂಬ ಸಂಕೋಚ, ಮುಜುಗರವು ಅವರಿಗೆ!



## 5. ಜಡತ್ವ :

ಜಡತ್ವ (Inertia) ನಮ್ಮ ರಕ್ತದಲ್ಲೇ ಬಂದಿದೆ. ಎಲ್ಲಿ ಏನಾದರೂ ನಡೆದರು ಪ್ರತಿಕ್ರಯಿಸದಿರುವ ಸ್ವಭಾವ. ನಮ್ಮ ಪ್ರಕಾರ ಒಳ್ಳೆಯವರೆಂದರೆ ಉಳಿದವರ ಯಾವ ವಿಷಯಕ್ಕೂ ಪ್ರತಿಕ್ರಯಿಸಿದವರು. ಆತ ಎಷ್ಟು ಒಳ್ಳೆಯವನಪ್ಪ,





ತಾನಾಯಿತು ತನ್ನ ಕೆಲಸವಾಯಿತು, ತನ್ನ ಮನೆಯಾಯಿತು ಎಂದು "ಸಂಭಾವಿತರ" ಬಗ್ಗೆ ಸಾಮಾನ್ಯವಾಗಿ ಕಂಡುಬರುವ ಅಭಿಪ್ರಾಯ. ಅದೇ ತನ್ನ ಮತ್ತು ಇತರರ ಹಕ್ಕುಗಳ ಉಲ್ಲಂಘನೆಯಾದಾಗ ಹೋರಾಡುವವ ತರಲೆ ಮನುಷ್ಯ!

ತತ್ಕಾರಣ, ಜಗತ್ತನ್ನು ಬದಲಾಯಿಸಲು ಸಾಧ್ಯವಿಲ್ಲ, ನಾವೂ ಆ ಬಗ್ಗೆ ಏನೂ ಮಾಡಬೇಕಾಗಿಲ್ಲವೆಂದು ನಮ್ಮ ಅಭಿಪ್ರಾಯ! ನಮ್ಮ ಆಲಸ್ಯಕ್ಕೆ ಇದಕ್ಕಿಂತ ಉತ್ತಮವಾದ ಸಬೂಬು ಸಿಕ್ಕಲಿಕ್ಕಿಲ್ಲ!

## 6. ಶಿಕ್ಷಣವ್ಯವಸ್ಥೆ :

ನಮ್ಮ ಶಿಕ್ಷಣ (ಅ.) ವ್ಯವಸ್ಥೆ ವಾಸ್ತವವಾಗಿ ಈಸ್ಟ್ ಇಂಡಿಯಾ ಕಂಪೆನಿಗೆ ಕಾರಕೂನರನ್ನು ಸಿದ್ಧಮಾಡುವ ಉದ್ದೇಶದಿಂದ ಹುಟ್ಟಿಕೊಂಡದ್ದು. ಈಗ ಅದು ಸರಕಾರಿ ಕಚೇರಿಗಳಿಗೆ ಕಾರಕೂನರನ್ನು ತಯಾರುಮಾಡುತ್ತಿದೆಯಷ್ಟೆ! ಈ ಶಿಕ್ಷಣ ವ್ಯವಸ್ಥೆಯಲ್ಲಿ ಪ್ರಶ್ನಿಸುವ ಮನೋಭಾವವನ್ನಾಗಲಿ, ಸಾಮಾಜಿಕ ಬದಲಾವಣೆಯ ಅಗತ್ಯಗಳನ್ನಾಗಲಿ ಹೇಳಿಕೊಡಲಾಗುವುದಿಲ್ಲ.

ನಾಗರಿಕ ಪ್ರಜ್ಞೆ ಪಾಠದಲ್ಲಿ; ನಮ್ಮ ವಠಾರಗಳನ್ನು ಶುಚಿಮಾಡಿಡಬೇಕು; ರಸ್ತೆಗಳನ್ನು ಗುಡಿಸಬೇಕೆಂದು ಮಾತ್ರ ಕಲಿಸಲಾಗುತ್ತದೆ. ರಸ್ತೆ ಗುಡಿಸಲು ಸಂಬಳ ತಿಂದು, ಅದನ್ನು ಮಾಡದಿರುವವನಿಂದ ಹೇಗೆ ಕೆಲಸಮಾಡಿಸಿಕೊಳ್ಳಬೇಕೆಂದು ಯಾರೂ ಕಲಿಸುವುದಿಲ್ಲ! ನಾಗರಿಕರಾಗಿ ನಮ್ಮ ಹಕ್ಕುಗಳೇನು, ಅವುಗಳ ಉಲ್ಲಂಘನೆ ನಡೆದಾಗ ಪರಿಸ್ಥಿತಿಯನ್ನು ಸರಿಪಡಿಸಿಕೊಳ್ಳುವುದು ಹೇಗೆ ಎಂಬುದನ್ನು ಯಾರೂ ಕಲಿಸುವುದಿಲ್ಲ.

ವಿದ್ಯಾರ್ಥಿಗಳಿಗೆ ಆದರ್ಶ ಪ್ರಾಯರಾಗಿರಬೇಕಾದ ಅಧ್ಯಾಪಕರಂತೂ ಶೋಷಿತವರ್ಗದ ಅತಿ ಕೆಳಸ್ತರಕ್ಕೆ ಸೇರಿದವರು. ಖಾಸಗಿ ಶಾಲೆಗಳಲ್ಲಂತೂ ಅಧ್ಯಾಪಕರು ಗುಲಾಮರೇ. ಖಾಸಗಿ ಶಾಲೆಯ ಆಡಳಿತದಲ್ಲಿ ವರ್ಗಕ್ಕೆ ತಗ್ಗಿ ನಡೆಯಬೇಕಾದ ಇವರು, ಸರಕಾರಿ ಶಾಲೆಗಳಲ್ಲಿ ಡಿ.ಡಿ.ಪಿ.ಐ. ಆಫೀಸಿನ ಜವಾನನಿಗೂ ಸಲಾಂ ಮಾಡಬೇಕು! ಇಂತಹ ಪರಿಸ್ಥಿತಿಯಲ್ಲಿರುವ ಶಿಕ್ಷಕರು ಗಾಂಧೀಜಿಯವರ ಸತ್ಯನಿಷ್ಠುರತೆ, ಸುಭಾಶ್ ಚಂದ್ರಬೋಸ್‌ರವರ ನಿರ್ಭೀತತೆಯ ಕುರಿತು ಮಾತನಾಡಿದ್ದನ್ನು ಮಕ್ಕಳು ನಂಬುವುದಿಲ್ಲ. ಚಿಕ್ಕ ವಯಸ್ಸಿನಿಂದಲೇ ಆಷಾಢಭೂತಿತನ (hypoerisy) ಕಲಿಯುತ್ತಾರೆ.

ಕೆಲವು ಅಧ್ಯಾಪಕ / ಅಧ್ಯಾಪಿಕೆಯರಂತೂ ಅತ್ಯಂತ ಸಮಾಜಘಾತುಕವಾದ ವೈಯಕ್ತಿಕ ಜೀವನವನ್ನು ನಡೆಸಿ, ಮಕ್ಕಳಿಗೆ ತೀರ ಕೆಟ್ಟ ಮಾದರಿಗಳಾಗಿರುತ್ತಾರೆ. ಇಂತಹ ವಾತಾವರಣದಲ್ಲಿ ಕಲಿತ ಮಕ್ಕಳು ತಾವೂ ಇಂತಹದ್ದೇ ಗುಣಗಳನ್ನು







ಮೈಗೂಡಿಸಿಕೊಂಡು, ಮುಂದೆ ನಿಷ್ಕ್ರಿಯ ಬಳಕೆದಾರ ಅಥವಾ ಸಮಾಜ ಘಾತುಕರಾಗಿರುತ್ತಾರೆ.

### 7. ಕೀಳರಿಮೆ (inferiority complex) :

ನಮ್ಮಲ್ಲಿ ಕೆಲವರಿಗೆ ಈ ಮನೋಭಾವವಿದೆ. ನಮಗೆ ಶಿಕ್ಷಣವಿಲ್ಲ, ಸಾಮಾಜಿಕ ಸ್ಥಾನಮಾನವಿಲ್ಲ, ಜನಬೆಂಬಲವಿಲ್ಲ. ಇತ್ಯಾದಿಗಳನ್ನು ಹೇಳಿಕೊಂಡು ತಮ್ಮನ್ನೇ ತಾವು ಕೆಳಮಟ್ಟದಲ್ಲಿದ್ದೇವೆಂದು ನಂಬುವಂತೆ ಮಾಡಿಕೊಳ್ಳುತ್ತಾರೆ.

"ನಿಮ್ಮ ಹಕ್ಕುಗಳನ್ನು ಕೇಳಿ"ಯೆಂದರೆ ಅವೆಲ್ಲಾ ಸಿಗಲಿಕ್ಕಿಲ್ಲವೆನ್ನುತ್ತಾರೆ. ಅವುಗಳಿಗಾಗಿ ನಾವು ಹೋರಾಟ ನಡೆಸಿ ಸಾಧ್ಯವೆಂದು ತೋರಿಸಿದಾಗ "ಅವೆಲ್ಲಾ ನಿಮಗೆ ಸಾಧ್ಯ, ನಮಗಿಲ್ಲ"ವೆಂದು ನಮ್ಮ ಶಿಕ್ಷಣ, ಸ್ಥಾನಮಾನಗಳನ್ನು ತಮ್ಮದಕ್ಕೆ ಹೋಲಿಸಿ ಕರುಬುತ್ತಾರೆ. ನಾವು ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸಮಾನರೆಂದು ಮನವರಿಕೆ ಮಾಡಲು ಪ್ರಯತ್ನಿಸಿದರೆ ಅದನ್ನು ಒಪ್ಪುವುದಿಲ್ಲ.

ನಿಜವಾಗಿಯೂ ಈ ಮನೋಭಾವದಿಂದ ಮಾನಸಿಕ ತಡೆಗಳಾದರೂ, ಕೆಲವರು ಬುದ್ಧಿವಂತಿಕೆಯಿಂದ ಸಬೂಬುಗಳನ್ನು ಹೇಳಿ ತಮ್ಮ ಹೊಣೆಗಾರಿಕೆಗಳಿಂದ ನುಣುಚಿಕೊಳ್ಳುತ್ತಾರೆ.

ಈ ಮನೋಭಾವವುಳ್ಳವರ ಇನ್ನೊಂದು ಲಕ್ಷಣ – ಇವರಿಗೆ ಮಧ್ಯವರ್ತಿಗಳು ಬೇಕು. ತತ್ಕಾರಣವೇ ಇವರು ತಮ್ಮ ಕೆಲಸ ಮಾಡಿಸಲು ಪುಢಾರಿಗಳು, ತಲೆಹಿಡುಕರು ತಮ್ಮ ವಠಾರದಲ್ಲಿರುವ 'ಪ್ರಭಾವಿ' ವ್ಯಕ್ತಿಗಳ ಮೊರೆ ಹೋಗುತ್ತಾರೆ.

ಇದೇನೂ ಮಾನಸಿಕ ತಡೆಗಳ ಪೂರ್ಣವಾದ ಪಟ್ಟಿಯಲ್ಲ. ಓದುಗರು ದಯವಿಟ್ಟು ತಾವು ನಿಷ್ಕ್ರಿಯರಾಗಿರುವ ಅಗಣಿತ ಸಂದರ್ಭಗಳನ್ನು ಜ್ಞಾಪಿಸಿಕೊಂಡು, ತಮ್ಮನ್ನು ಕ್ರಿಯಾಸಕ್ತರಾಗದಂತೆ ತಡೆದ ಕಾರಣಗಳೇನೆಂದು ವಿಶ್ಲೇಷಿಸಿ ಈ ಬಗ್ಗೆ ಸರಿಯಾದ ಚಿಂತನೆ ನಡೆಸಿ, ಕಾರಣಗಳನ್ನು ಹುಡುಕಿ ಕಂಡುಕೊಳ್ಳಬೇಕು.

ಮಾನಸಿಕ ತಡೆಗಳನ್ನು ನಾವು ಅರ್ಥ ಮಾಡಿಕೊಂಡಾಗ ಮಾತ್ರ ಅವುಗಳನ್ನು ಮೀರಲು ಸಾಧ್ಯ. ಇದು ಪ್ರತಿಯೊಬ್ಬ ಬಳಕೆದಾರ ಹಾಗೂ ಆಂದೋಲನದ ಕ್ರಿಯಾಸಕ್ತನ ಆದ್ಯ ಕರ್ತವ್ಯ.

ಇವುಗಳನ್ನು ಅರ್ಥೈಸಿಕೊಂಡು, ಮೀರಿ, ಮುನ್ನಡೆದಲ್ಲಿ ಮಾತ್ರ ನಾವು ಬಳಕೆದಾರರ ಆಂದೋಲನದಲ್ಲಿ ಸಕ್ರಿಯ ಪಾತ್ರ ವಹಿಸಬಹುದು.





# ಬಳಕೆದಾರರ ಆಂದೋಲನ ಎತ್ತ?

ಬಳಕೆದಾರರ ಆಂದೋಲನವೆಂದರೆ ನಮ್ಮ ದೇಶದ ಪ್ರಜೆಗಳನ್ನು ಪ್ರಜ್ಞಾವಂತ, ಕಾರ್ಯಶೀಲ ನಾಗರಿಕರನ್ನಾಗಿ ಮಾಡುವ ಉದ್ದೇಶದಿಂದ ಆರಂಭವಾದ ಆಂದೋಲನ. ದೇಶದ ಇತರ ಕಡೆಗಳಲ್ಲಿ ಇದಕ್ಕೆ ತೀರಾ ಸೀಮಿತ, ಸಂಕುಚಿತ ಉದ್ದೇಶಗಳಿದ್ದರೂ ದಕ್ಷಿಣ ಕನ್ನತ ಜಿಲ್ಲೆಯಲ್ಲಿ ಇದಕ್ಕೆ ವಿಶಾಲವಾದ ಕಾರ್ಯವ್ಯಾಪ್ತಿಯಿದೆ.

ವೈಯಕ್ತಿಕ ರೀತಿಯಿಂದ ನಡೆದಲ್ಲಿ ಜಯಸಿಗದಿರಬಹುದು. ಹೋರಾಟ ವಿಫಲವಾಗಬಹುದು. ಆದರೆ, ವ್ಯವಸ್ಥಿತವಾಗಿ ನಡೆದ ಹೋರಾಟಗಳಲ್ಲಿ ಜಯಸಿಗುವುದು ಹೆಚ್ಚು ಸಾಧ್ಯ. ಕೆಲವೊಮ್ಮೆ, ಹೋರಾಟ ನಡೆಸಿದ ವ್ಯಕ್ತಿಗೆ ಪ್ರತಿಫಲ ಸಿಗದಿದ್ದರೂ ಪೂರೈಕೆದಾರರು ಮುಂದೆ ಬರಬಹುದಾದ ಇಂತಹ ಪ್ರಕರಣಗಳಿಗೆ ತಡೆಮಾಡಿದ ನಿದರ್ಶನಗಳಿವೆ.

ಬಳಕೆದಾರರ ಆಂದೋಲನವು ಕಾನೂನುಗಳ ಉಪಯೋಗ ಪಡೆಯುವುದು. ಆದರೆ, ಅದು ಬರೇ ಕಾನೂನುಗಳಿಗೆ ಸೀಮಿತವಾದ ಆಂದೋಲನವಲ್ಲ. ನಾವು ಅಗತ್ಯವಿರುವಾಗ ಮಾತ್ರ ಅವುಗಳ ಸಹಾಯ ಪಡೆಯುತ್ತೇವೆ. ಕೆಲವರು ಭಾವಿಸಿದಂತೆ ಬಳಕೆದಾರರ ರಕ್ಷಣಾ ಕಾಯಿದೆ, 1986 ಬಳಕೆದಾರರ ಸಂಘಟನೆಗಳು ಹುಟ್ಟಿಕೊಳ್ಳಲು ಕಾರಣವಲ್ಲ. ಇದು ಬಳಕೆದಾರರ ಆಂದೋಲನಕ್ಕೆ ಲಭ್ಯವಿರುವ ಅಸ್ತ್ರಗಳಲ್ಲೊಂದು ಮಾತ್ರ. ಇದನ್ನು ಬೇಕಾದಾಗ ಮಾತ್ರ ಉಪಯೋಗಿಸುತ್ತೇವೆ. ಈ ಕಾಯಿದೆಯ ಇತಿಮಿತಿಗಳು ಬಹಳಷ್ಟಿವೆ. ನಮ್ಮ ಕಾರ್ಯವಿಧಾನಗಳು ಇದಕ್ಕಿಂತಲೂ ಹೆಚ್ಚಿನ ಮಟ್ಟದಲ್ಲಿವೆ. ಈ ಕಾಯಿದೆಯ ಬಗ್ಗೆ ಈ ಪುಸ್ತಕದ ಬೇರೆಡೆ ವಿವರಗಳನ್ನು ಕೊಟ್ಟಿದ್ದೇವೆ.

ಈಗ ಆರ್ಥಿಕ ಉದಾರೀಕರಣದ ನೀತಿ, ಖಾಸಗೀಕರಣದ ಬಗ್ಗೆ ಒಲವು ಇತ್ಯಾದಿಗಳನ್ನು ಕಾಣುತ್ತೇವೆ. ಇವುಗಳ ಅನಿಷ್ಟಗಳನ್ನು ನಿಯಂತ್ರಿಸುವುದರಲ್ಲಿ ಬಳಕೆದಾರರ ಆಂದೋಲನವು ಮುಖ್ಯ ಪಾತ್ರ ವಹಿಸುತ್ತದೆ. ಖಾಸಗೀಕರಣವಾದೊಡನೆ ಬಳಕೆದಾರರ ಸಮಸ್ಯೆಗಳಿಗೆ ಪರಿಹಾರ ದೊರೆಯುವುದೆಂದು ಭಾವಿಸುವುದು ಮೂರ್ಖತನವಾದೀತು. ಯಾಕೆಂದರೆ, ನಮ್ಮ ಖಾಸಗಿಯವರೇನೂ ಧರ್ಮರಾಯರಲ್ಲ. ಈ ಪುಸ್ತಕದಲ್ಲಿ ಕೊಟ್ಟಿರುವ ನಿದರ್ಶನಗಳಲ್ಲಿ ಖಾಸಗಿಯವರ ಶೋಷಣೆಯ ಹಲವು ಮುಖಗಳನ್ನು ಕಾಣಬಹುದು. ಒಟ್ಟಿನಲ್ಲಿ ಬಳಕೆದಾರರ ಹಿತಾಸಕ್ತಿಗಳನ್ನು ಪೂರೈಕೆದಾರರು ಪಾಲಿಸಿದರೆ ಸಾಕು. ಇದು ಖಾಸಗಿ ರಂಗದಲ್ಲಾಗಲಿ, ಸರಕಾರಿ







ಏಕಸ್ವಾಮ್ಯದಲ್ಲಾಗಲಿ, ಸಹಕಾರಿ ರಂಗದಲ್ಲಾಗಲಿ ಇರುವುದು ನಮಗೆ ಅಷ್ಟು ಮುಖ್ಯವಲ್ಲ. ಸರಕಾರಿ ರಂಗದಲ್ಲೂ ಉತ್ತಮಸೇವೆಗಳು ಸಿಗಬಾರದೆಂದೇನಿಲ್ಲ.

ಮುಂದೆ, ಉದಾರೀಕರಣದ `ಹೆಸರಿನಲ್ಲಿ ದೇಶವನ್ನು ಅನೇಕ ಬಹುರಾಷ್ಟ್ರೀಯ ಕಂಪೆನಿಗಳು ಪ್ರವೇಶಿಸಲಿವೆ. ಇವರ ಅಬ್ಬರದ ಪ್ರಚಾರ, ಅವಶ್ಯವಿಲ್ಲದ ವಸ್ತುಗಳಿಗೆ ಬೇಡಿಕೆ ಹುಟ್ಟಿಸುವ ವೈಖರಿ ಎಲ್ಲವೂ ಅಂತಾರಾಷ್ಟ್ರೀಯ ಮಟ್ಟದಲ್ಲಿರುತ್ತವೆ. ಇಂತಹವುಗಳ ಬಗ್ಗೆ ಜಾಗ್ರತಿ ಹುಟ್ಟಿಸುವುದು ನಮ್ಮ ಆದ್ಯ ಕರ್ತವ್ಯ. ಇದಲ್ಲದೆ, ನಮ್ಮ ದೇಶದಲ್ಲಿನ ಕಾನೂನು ಪಾಲನಾ ವ್ಯವಸ್ಥೆಗಳು ತೀರಾ ಸಡಿಲಾಗಿರುವ ಕಾರಣ, ಇವುಗಳನ್ನು ಅನುಷ್ಠಾನಕ್ಕೆ ತರುವಲ್ಲಿ ಸಾಕಷ್ಟು ಭ್ರಷ್ಟಾಚಾರವು ನಡೆಯುವ ಸಾಧ್ಯತೆಗಳಿವೆ. ಹೀಗಿರುವ ಪರಿಸ್ಥಿತಿಯಲ್ಲಿ ಪರಿಸರದ ಬಗ್ಗೆ ಜಾಗ್ರತಿಯನ್ನುಂಟುಮಾಡುವುದರಲ್ಲೂ ಬಳಕೆದಾರರ ಸಂಘಟನೆಗಳಿಗೆ ಮಹತ್ತರ ಪಾತ್ರವಿದೆ.

ಎಡ್ಮಂಕ್ ಬರ್ಕ್ ಎಂಬ ಖ್ಯಾತ ರಾಜಕಾರಣಿ ಹೇಳಿದ ಈ ವಾಕ್ಯಗಳನ್ನು ಕೊನೆಯದಾಗಿ ನೆನಪಿಸುವುದು ಅಗತ್ಯ. 'ಜಗತ್ತಿನ ದುಷ್ಟ, ಕರಾಳ ಶಕ್ತಿಗಳ ಗೆಲುವಿಗೆ, ಸಾಕಷ್ಟು ಮಂದಿ ಒಳ್ಳೆಯವರ ನಿಷ್ಕ್ರಿಯತೇ ಸಾಕು. ' (All it takes for the dark frees of evil to take over this world in enough number of good people who want to do nothing). ಇಂತಹ ದುಷ್ಟ, ಕರಾಳ ಶಕ್ತಿಗಳು ಜಯಿಸಲು ಆಸ್ಪದವಾಗುವಂತೆ ಒಳ್ಳೆಯವರು ನಿಷ್ಕ್ರಿಯರಾಗಿರಬೇಕೇ? ಎಂಬುದು ನನ್ನ ಕೊನೆಯ ಪ್ರಶ್ನೆ.









# ಅನುಬಂಧ – 1

ಬಳಕೆದಾರರ ರಕ್ಷಣೆಗಾಗಿರುವ ಕಾನೂನು–ಕಾಯಿದೆಗಳು

1. ಬಳಕೆದಾರರ ರಕ್ಷಣಾ ಕಾಯಿದೆ, 1986.
2. ಎಂ. ಆರ್. ಟಿ. ಪಿ. ಕಾಯಿದೆ, 1969
3. ಆಹಾರ ಮತ್ತು ಔಷಧ ಕಾಯಿದೆ, 1940.
4. ಔಷಧಗಳು ಮತ್ತು ಅದ್ಭುತ ಚಿಕಿತ್ಸಾ ವಿಧಾನಗಳು (ಆಕ್ಷೇಪಾರ್ಹ ಜಾಹೀರಾತುಗಳ ನಿಷೇಧ) ಕಾಯಿದೆ, 1954.
5. ಔಷಧ ನಿಯಂತ್ರಣ ಕಾಯಿದೆ, 1950.
6. ಆವಶ್ಯಕ ವಸ್ತುಗಳ ಕಾಯಿದೆ, 1955.
7. ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆ, 1954.
8. ತೂಕ ಮತ್ತು ಅಳತೆ ನಿಯಂತ್ರಣ ಕಾಯಿದೆ, 1970.
9. ಪ್ಯಾಕ್ ಆದ ಸಾಮಗ್ರಿಗಳ ತೂಕ ಮತ್ತು ಅಳತೆ ನಿಯಂತ್ರಣ ಕಾಯಿದೆ, 1977.
10. ಬಹುಮಾನ ಚೀಟಿಗಳು ಮತ್ತು ಹಣ ಮರುಚಲಾವಣಾ ಯೋಜನೆಗಳ (ನಿಷೇಧ) ಕಾಯಿದೆ, 1978.







# ಅನುಬಂಧ – 2

ಬಳಕೆದಾರರ ರಕ್ಷಣಾ ಕಾಯಿದೆ, 1986

## ಮುಖ್ಯಾಂಶಗಳು

- ಈ ಕಾಯಿದೆಯಡಿಯಲ್ಲಿ ಗ್ರಾಹಕರು ತಾವು ಹಣಕೊಟ್ಟು ಪಡೆದ/ಉಪಯೋಗಿಸಿದ ವಸ್ತು ಅಥವಾ ಸೇವೆಗಳಲ್ಲಿರುವ ಕುಂದು–ಕೊರತೆಗಳನ್ನು ಸರಿಪಡಿಸಿಕೊಳ್ಳಬಹುದು ಅಥವಾ ಪರಿಹಾರ ಪಡೆಯಬಹುದು. ಈ ಕಾಯಿದೆಯ ಕೆಲವು ಅಂಶಗಳು ಕೆಳಗಿವೆ.

## ಗ್ರಾಹಕ ಎಂದರೆ ಯಾರು?

1. ಗ್ರಾಹಕ ಎಂದರೆ – ಯಾವುದೇ ಸರಕನ್ನು ಅದಷ್ಟು ಪೂರ್ತಿ ಹಣ ಕೊಟ್ಟು ಅಥವಾ ಭಾಗಶಃ ಬೆಲೆಕೊಟ್ಟು ಖರೀದಿಸಿದ ವ್ಯಕ್ತಿ ಅಥವಾ ಖರೀದಿಸಿದ ವ್ಯಕ್ತಿಯ ಸಮ್ಮತಿಯಿಂದ ಅದನ್ನು ಉಪಯೋಗಿಸುವಾತ. ಆದರೆ, ವಸ್ತುಗಳನ್ನು ಪುನರ್ ಮಾರಾಟಕ್ಕಾಗಿ ಕೊಳ್ಳುವಾತ ಗ್ರಾಹಕ ಆಗಲಾರ.

2. ಗ್ರಾಹಕ ಎಂದರೆ – ಯಾವುದೇ ಸೇವೆಯನ್ನು ಆದರ ಪೂರ್ತಿ ಅಥವಾ ಭಾಗಶಃ ಬೆಲೆಕೊಟ್ಟು ಅಥವಾ ಹಿಂದಿನಿಂದ ಹಣ ಕೊಡುವ ಕರಾರಿನಲ್ಲಿ ಸೇವೆಯನ್ನು ಪಡೆದಿದ್ದರೆ ಅಥವಾ ಮಾಡಲು ಸೇವೆಯನ್ನು ಪಡೆದವನ ಅನುಮತಿಯಿಂದ ಅದನ್ನು ಉಪಯೋಗಿಸುವಾತ.

## ದೂರು ಫಿರ್ಯಾದಿಯೆಂದರೇನು?

1. ಯಾವುದೇ ವ್ಯಾಪಾರಿಯ ಅಪ್ರಾಮಾಣಿಕ ವಾಣಿಜ್ಯ ವ್ಯವಹಾರ (unfair trade practice)ದಿಂದಾಗಿ ಹಾನಿ ಅಥವಾ ನಷ್ಟಕೊಳಗಾದವನ ದೂರು.

2. ಖರೀದಿಸಿದ ವಸ್ತುವಿನಲ್ಲಿ ದೋಷಗಳ ಬಗ್ಗೆ ದೂರು.

3. ಸೇವೆಯಲ್ಲಿ ಯಾವುದೇ ಕೊರತೆ / ನ್ಯೂನ್ಯತೆ.

4. ಖರೀದಿಸಿದ ವಸ್ತುವಿಗೆ ಕಾನೂನು ಪ್ರಕಾರ ನಿಗದಿ ಪಡಿಸಿದ / ಪೊಟ್ಟಣದ ಮೇಲೆ ನಮೂದಿಸಿದ ಬೆಲೆಗಿಂತ ಹೆಚ್ಚಿನ ಬೆಲೆಯನ್ನು ವಿಧಿಸಿದ್ದರೆ ಪರಿಹಾರ ಪಡೆಯಲು ಕೊಡುವ ದೂರು.







## ಗ್ರಾಹಕನ ದೂರು (consumer dispute) :

ಗ್ರಾಹಕ ಸಲ್ಲಿಸಿದ ದೂರಿನ ಬಗ್ಗೆ ಸಂಬಂಧಿಸಿದ ಪೂರೈಕೆದಾರ ಅಲ್ಲಗಳೆದರೆ ಅಥವಾ ತಕರಾರು ವ್ಯಕ್ತಪಡಿಸಿದರೆ ಅಲ್ಲಿ ಗ್ರಾಹಕನ ದೂರು ಉಂಟಾಗುತ್ತದೆ.

## ಗ್ರಾಹಕನ ದೂರಿನಲ್ಲಿರುವ ಅಂಶಗಳು.

1. ದೋಷ / ನ್ಯೂನ್ಯತೆ : ಯಾವುದೇ ವಸ್ತುವಿನಲ್ಲಿನ ದೋಷ, ಕುಂದು, ಕೊರತೆ, ಕಡಿಮೆ ಅಳತೆ, ಅಶುದ್ಧತೆ. ಈ ಗುಣಮಟ್ಟಗಳನ್ನು ವಿಧಿಸುವ ಯಾವುದೇ ಕಾಯಿದೆಯಿದ್ದರೆ ಅದು ವಿಧಿಸಿದ ಗುಣಮಟ್ಟಗಳಿಗೆ ಇಲ್ಲದಿರುವುದು.

2. ಕೊರತೆ : ಯಾವುದೇ ಸೇವೆಗೆ ಸಂಬಂಧಪಟ್ಟಂತೆ ಅಪರಿಪೂರ್ಣತೆ, ಕಳಪೆ ಗುಣಮಟ್ಟ, ಅಥವಾ ಅದನ್ನು ಪೂರೈಸಬೇಕಾದ ರೀತಿ, ವಿಧಾನ, ಮತ್ತು ಪದ್ಧತಿಗಳನ್ನು ನಿರ್ದಿಷ್ಟ ಪಡಿಸಿದ ಕಾನೂನಿನ ವ್ಯತಿರಿಕ್ತವಾದರೆ ಅಥವಾ ಯಾವುದೇ ಕರಾರಿನ ಒಪ್ಪಂದಕ್ಕೆ ವ್ಯತಿರಿಕ್ತವಾದರೆ.

## ಸರಕು ಅಥವಾ ವಸ್ತು :

ಇದು ಸರಕುಗಳ ಮಾರಾಟದ ಅಧಿನಿಯಮ, 1930ರಲ್ಲಿ ನಿರ್ದಿಷ್ಟಪಡಿಸಿದಂತೆ ಇರುತ್ತದೆ.

**ಸೇವೆ :** ಸಾಮಾನ್ಯವಾಗಿ ಗ್ರಾಹಕನಿಗೆ ಕೊಳ್ಳಲು ಅನುಕೂಲವಾಗಿರುವ ಬ್ಯಾಂಕು, ಹಣಕಾಸು, ವಿಮೆ, ವಿದ್ಯುಚ್ಛಕ್ತಿ, ಊಟ, ವಸತಿ, ಮನೋರಂಜನೆ ಇತ್ಯಾದಿ. ಆದರೆ ಉಚಿತವಾಗಿ ಒದಗಿಸಲಾಗುವ ಮತ್ತು ವೈಯಕ್ತಿಕ ಒಪ್ಪಂದದ ಅಡಿಯಲ್ಲಿ ಪೂರೈಕೆಯಾಗುವ ಸೇವೆಗಳು ಇದರಡಿಯಲ್ಲಿ ಬರುವುದಿಲ್ಲ.



## ಪರಿಹಾರಗಳು

1. ವಸ್ತುವಿನಲ್ಲಿ ದೋಷವನ್ನು ಯೋಗ್ಯ ಪ್ರಯೋಗಶಾಲೆಯು ತೋರಿಸಿಕೊಟ್ಟಲ್ಲಿ ಅದನ್ನು ತೆಗೆದು ಹಾಕುವುದು.

2. ದೋಷ ಪೂರಿತ ವಸ್ತುವಿನ ಬದಲಿಗೆ ಸರಿಯಾದ ಗುಣಮಟ್ಟದ್ದನ್ನು ಬದಲಾಯಿಸಿಕೊಡುವುದು.

3. ದೂರುಕೊಟ್ಟವನಿಗೆ ಅದರ ಬೆಲೆಯನ್ನು ಹಿಂದಿರುಗಿಸುವುದು.



4. ವಸ್ತುವಿನ ಉಪಯೋಗದಿಂದ ಆದ ಹಾನಿ ಅಥವಾ ನಷ್ಟಕ್ಕೆ ಪರಿಹಾರ ಕೊಡಿಸುವುದು. ಇದರಲ್ಲಿ ವ್ಯಾಜ್ಯ ಪರಿಹಾರ ಮಾಡಿಸಿಕೊಳ್ಳುವುದಕ್ಕೆ ಗ್ರಾಹಕನಿಗೆ ತಗಲಿದ ವೆಚ್ಚವೂ ಸೇರಿರುತ್ತದೆ.

ಮೇಲ್ಕಾಣಿಸಲಾದವಲ್ಲಿ ವಸ್ತು ಎಂಬುದು ಸೇವೆಗೂ ಅನ್ವಯವಾಗುತ್ತದೆ.



## ದೂರು ಸಲ್ಲಿಸುವ ವಿಧಾನ :

1. ದೂರನ್ನು ವಸ್ತು ಯಾ ಸೇವೆಯನ್ನು ಹಣ ಕೊಟ್ಟು ಪಡೆದ ವ್ಯಕ್ತಿ ಅಥವಾ ಆತನ ಸಮ್ಮತಿಯಿಂದ ಉಪಯೋಗಿಸುವ ವ್ಯಕ್ತಿ.

2. ಮೇಲ್ಕಾಣಿಸಲಾದ ವ್ಯಕ್ತಿಯಲ್ಲಿ ಒಂದು ಪಾಲುಗಾರಿಕೆ ಸಂಸ್ಥೆ, ಅವಿಭಕ್ತ ಹಿಂದೂ ಕುಟುಂಬ, ಸಹಕಾರಿ ಸಂಘ, ಜನರನ್ನು ಸಂಘಟಿಸುವ ಯಾವುದೇ ಸಂಘವೂ ಬರುವುದು. ಇದು ನೋಂದಾಯಿತವಾಗಿರಬೇಕೆಂಬುದು ಕಡ್ಡಾಯವಲ್ಲ. ದೂರನ್ನು ಸಲ್ಲಿಸಬಹುದು.

## ದೂರಿನ ಮಾದರಿ :

.......... ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರವೇದಿಕೆ
......... ಜಿಲ್ಲೆ.

1. **ಅರ್ಜಿದಾರರ ಪೂರ್ತಿ ಹೆಸರು, ವಿಳಾಸ :**

2. **ಎದುರಾಳಿಗಳ ಪೂರ್ತಿ ಹೆಸರು, ವಿಳಾಸ :**

ದೂರು

1. ಅರ್ಜಿದಾರರ ಹೆಸರು, ವಿಳಾಸ ಮತ್ತು ಅವರು ಗ್ರಾಹಕರಾಗುತ್ತಾರೆಯೇ, ಹೇಗೆಂಬುದರ ವಿವರಣೆ.

2. ಎದುರಾಳಿಗಳ ಹೆಸರು, ವಿಳಾಸದೊಂದಿಗೆ ಗ್ರಾಹಕರ ದೂರಿನ ವಿವರಗಳು. ಇದರೊಂದಿಗೆ ತಮ್ಮೊಂದಿಗಿರುವ ಪುರಾವೆಗಳ ದಾಖಲೆಗಳು.

3. ಕೇಳುವ ಪರಿಹಾರ. ಇದು ನಿಖರ, ಸ್ಪಷ್ಟರೂಪದಲ್ಲಿರಬೇಕು.

ಊರು
ದಿನಾಂಕ : ಅಜಿದಾರರ ಸಹಿ.

ಪ್ರಮಾಣೀಕರಣ

ನಾನು .... ಇಂತಹವರ ಮಗ / ಮಗಳು / ಪತ್ನಿ ....... ವಿಳಾಸ ........ ಮೇಲ್ಕಾಣಿಸಲಾದ ದೂರಿನ ಅರ್ಜಿದಾರನಾಗಿರುತ್ತೇನೆ. ಸದರಿ ದೂರಿನಲ್ಲಿ ನಮೂದಿಸಲಾದ ವಿಷಯಗಳು ಸತ್ಯವಾಗಿವೆಯೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ. ಸದರಿ ದೂರನೊಂದಿಗೆ ಲಗತ್ತೀಕರಿಸಿರುವ ದಾಖಲೆಗಳ ಪ್ರತಿಗಳು ಮೂಲಗಳ ಯಥಾಪ್ರತಿಗಳಾಗಿರುತ್ತವೆ. ಇವುಗಳ ಮೂಲ ಪ್ರತಿಗಳನ್ನು ವಿಚಾರಣೆಯ ಸಮಯದಲ್ಲಿ ಹಾಜರುಪಡಿಸುತ್ತೇನೆ.

ಊರು
ದಿನಾಂಕ ಸಹಿ







ಈ ದೂರಿನ ಪ್ರತಿಗಳನ್ನು ಎಷ್ಟು ಎದುರಾಳಿಗಳಿದ್ದಾರೋ ಅಷ್ಟು ಮತ್ತು ಒಂದು ಅಧಿಕವಾಗಿ ಸಲ್ಲಿಸಬೇಕು.

ದೂರಿನ ಇತ್ಯರ್ಥಕ್ಕೆ ಯಾವುದೇ ಶುಲ್ಕ / ಸ್ಟಾಂಪು, ಕಾಗದಗಳ ಅಗತ್ಯವಿಲ್ಲ.

## ದೂರುಗಳ ಇತ್ಯರ್ಥಕ್ಕಾಗಿರುವ ಸಂಸ್ಥೆಗಳು

1. ಜಿಲ್ಲಾ ವೇದಿಕೆ : ಕೇಳಿದ ಪರಿಹಾರದ ಮೊತ್ತ 5 ಲಕ್ಷಕ್ಕಿಂತ ಕಡಿಮೆಯಿದ್ದಲ್ಲಿ.

2. ರಾಜ್ಯ ಆಯೋಗ :

   a. ಕೇಳಿದ ಪರಿಹಾರದ ಮೊತ್ತ 5 ಲಕ್ಷ ಮತ್ತು 20 ಲಕ್ಷದ ಮಧ್ಯೆ ಇದ್ದಲ್ಲಿ.

   b. ಜಿಲ್ಲಾ ವೇದಿಕೆಗಳ ತೀರ್ಪಿನ ಮೇಲೆ ಅಪೀಲು.

3. ರಾಷ್ಟ್ರೀಯ ಆಯೋಗ :

   a. ಕೇಳಿದ ಪರಿಹಾರದ ಮೊತ್ತ 20 ಲಕ್ಷಕ್ಕಿಂತ ಅಧಿಕವಿದ್ದಲ್ಲಿ

   b. ರಾಜ್ಯ ಆಯೋಗಗಳ ತೀರ್ಪಿನ ಮೇಲೆ ಅಪೀಲು.

## ದೂರುಗಳ ಇತ್ಯರ್ಥಕ್ಕೆ ಸಮಯಾವಕಾಶ

ಸಾಮಾನ್ಯವಾಗಿ ದೂರು ಬಂದೊಡನೆ ಸಂಬಂಧ ಪಟ್ಟವರು ಅದರ ಪ್ರತಿಯನ್ನು ಎದುರಾಳಿಗೆ ಕಳುಹಿಸಿ ಇದರ ಬಗ್ಗೆ ಅವರ ಹೇಳಿಕೆಯನ್ನು ಪಡೆಯುತ್ತಾರೆ. ಬಳಿಕ, ವಿಚಾರಣೆಯನ್ನು ನಡೆಸಲಾಗುತ್ತದೆ. ವಿಚಾರಣೆಯ ಸಮಯದಲ್ಲಿ ಎದುರು ಪಾರ್ಟಿಯವರು ಹಾಜರಾಗಲು ನೋಟೀಸು ನೀಡಲಾಗುತ್ತದೆ. ವಿಚಾರಣೆಯ ಸಮಯದಲ್ಲಿ ಸಾಕ್ಷ್ಯಾಧಾರಗಳನ್ನು ಮಂಡಿಸಲು ಎರಡು ಕಡೆಯವರಿಗೂ ಅವಕಾಶವಿದೆ. ಬಳಕೆದಾರರ ರಕ್ಷಣಾ ಕಾಯಿದೆಯನ್ವಯ ದೂರು ಸ್ವೀಕರಿಸಿದ 90 ದಿನಗಳೊಳಗೆ ತೀರ್ಪನ್ನು ನೀಡಬೇಕು.

## ಸುಳ್ಳು ಆಪಾದನೆ ಹೊರಿಸಿದಲ್ಲಿ ದಂಡ

ಬಳಕೆದಾರರು ಮಿಥ್ಯಾರೋಪಗಳನ್ನು ಹೊರಿಸಿದಲ್ಲಿ ರೂ. 10,000ರವರೆಗೆ ಜುಲ್ಮಾನೆ ಹಾಗೂ ಎದುರಾಳಿಗಳಿಗೆ ತಗಲಿದ ಖರ್ಚನ್ನು ವಿಧಿಸಬಹುದು.

## ತೀರ್ಪನ್ನು ಪಾಲಿಸದಿದ್ದಲ್ಲಿ ದಂಡ / ಶಿಕ್ಷೆ

ಜಿಲ್ಲಾ ವೇದಿಕೆ ಯಾ ರಾಷ್ಟ್ರೀಯ ಆಯೋಗ ಯಾ ರಾಜ್ಯ ಆಯೋಗಗಳ ತೀರ್ಪನ್ನು ನಿರ್ಲಕ್ಷಿಸಿದಲ್ಲಿ ರೂ. 10,000ದ ವರೆಗೆ ಜುಲ್ಮಾನೆ ಹಾಗೂ 3 ವರ್ಷಗಳ ವರೆಗೆ ಕಠಿಣ ಸಜೆಯನ್ನು ವಿಧಿಸುವ ಹಕ್ಕು ಇವುಗಳಿಗಿದೆ.







# ಅನುಬಂಧ – 3

ಕರ್ನಾಟಕದಲ್ಲಿರುವ ಗ್ರಾಹಕ ವೇದಿಕೆಗಳ ವಿಳಾಸಗಳು

1. ಅಧ್ಯಕ್ಷರು
   ಕರ್ನಾಟಕ ಗ್ರಾಹಕ ವ್ಯಾಜ್ಯಗಳ ಪರಿಹಾರ ಆಯೋಗ
   ಬಸವ ಭವನ, ಬೆಂಗಳೂರು – 560 001

2. ಅಧ್ಯಕ್ಷರು
   ಬೆಂಗಳೂರು ನಗರ ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರ ವೇದಿಕೆ
   8ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು – 560 009

3. ಅಧ್ಯಕ್ಷರು
   ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರ ವೇದಿಕೆ
   ನಂ. 1/7 ಹೋಟೇಲ್ ಸ್ವಾತಿ ಕಾಂಪ್ಲೆಕ್ಸ್,
   ಪ್ಲಾಟ್‌ಫಾರಂ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು – 560 020

4. ಅಧ್ಯಕ್ಷರು
   ಮೈಸೂರು ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರ ವೇದಿಕೆ
   ನಂ. 1021, ಜಯಲಕ್ಷ್ಮಿ ರಸ್ತೆ, ಚಾಮರಾಜಮೊಹಲ್ಲ,
   ಮೈಸೂರು – 570 004

5. ಅಧ್ಯಕ್ಷರು
   ದಕ್ಷಿಣ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯ ಪರಿಹಾರ ವೇದಿಕೆ
   ನೆಲಮಹಡಿ, ಮಂಗಳೂರು ಮಹಾನಗರ ಪಾಲಿಕೆ ಕಟ್ಟಡ
   ಲಾಲ್‌ಬಾಗ್, ಮಂಗಳೂರು – 575 003

6. ಅಧ್ಯಕ್ಷರು, ಗ್ರಾಹಕರ ವ್ಯಾಜ್ಯ ಪರಿಹಾರ ವೇದಿಕೆ, ಬೀದರ್, ಬಿಜಾಪುರ, ಧಾರವಾಡ, ಗುಲ್ಬರ್ಗಾ, ಚಿತ್ರದುರ್ಗ, ಕಾರವಾರ, ಮಡಿಕೇರಿ, ಶಿವಮೊಗ್ಗ, ರಾಯಚೂರು, ಹಾಸನ, ಕೋಲಾರ, ಚಿಕ್ಕಮಗಳೂರು, ತುಮಕೂರು.







7. ಅಧ್ಯಕ್ಷರು
ಮಂಡ್ಯ ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರ ವೇದಿಕೆ
ನಂ. 2062, 11ನೇ ಅಡ್ಡ ರಸ್ತೆ, ರುದ್ರಪ್ಪ ಬಿಲ್ಡಿಂಗ್
ಸುಭಾಷ್ ನಗರ, ಮಂಡ್ಯ – 571 401

20. ಅಧ್ಯಕ್ಷರು
ಬಳ್ಳಾರಿ ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರ ವೇದಿಕೆ
ಜಿಲ್ಲಾ ಕಛೇರಿ ಕಟ್ಟಡ, ಬಳ್ಳಾರಿ – 583 101

21. ಅಧ್ಯಕ್ಷರು
ಬೆಳಗಾಂ ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರ ವೇದಿಕೆ
ಮಹಾತ್ಮಾ ಗಾಂಧಿ ಭವನ, 1ನೇ ಮಹಡಿ,
ಸನ್ಮೂನ್ ಹೊಟೆಲ್ ಹಿಂಭಾಗ ಕಾಲೇಜು ರಸ್ತೆ
ಬೆಳಗಾಂ – 590 002







# ಅನುಬಂಧ – 4

ಬಳಕೆದಾರರ ಆಂದೋಲನದಲ್ಲಿ ಆಸಕ್ತರಿಗೆ / ಕಾರ್ಯಕರ್ತರಿಗೆ ಉಪಯುಕ್ತವಾಗಬಲ್ಲ ಇತರ ಪುಸ್ತಕಗಳು :

1. ಒಡೆಯರಲ್ಲ ಸೇವರಕು – ಡಾ. ಕೆ. ಪಿ. ಎಸ್. ಕಾಮತ್
   ಪ್ರಕಾಶಕರು : ಬಳಕೆದಾರರ ವೇದಿಕೆ, ಉಡುಪಿ

2. ಭೀಮಾನಾಗೋ ಬಳಕೆದಾರ – ಡಾ. ಎ.ವಿ. ಹುಯಿಲಗೋಳ
   ಪ್ರಕಾಶಕರು : ನಾಗರಿಕ ವೇದಿಕೆ; ಹುಬ್ಬಳ್ಳಿ

3. ಏಳು ಎದ್ದೇಳು ಓ ಬಳಕೆದಾರ : ಲೇಖಕ, ಪ್ರಕಾಶಕರು : ಬಳಕೆದಾರರ ಬಳಗ, ಕೋಡಿ–ಕನ್ಯಾನ, ಕುಂದಾಪುರ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

4. ಗ್ರಾಹಕ : ಸಂಪಾದಕಿ : ಪ್ರಭಾಮೂರ್ತಿ
   ಪ್ರಕಾಶಕರು : ಕರ್ನಾಟಕ ಗ್ರಾಹಕ ಸಂವರ್ಧನಾ ವೇದಿಕೆ, 160, 30ನೇ 'ಎ' ಅಡ್ಡ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು – 560 082

5. ನಿಷೇಧಿತ ಔಷಧಗಳು ಹಾಗೂ ಹಾನಿಕಾರಕ ಔಷಧಗಳು
   ಡ್ರಗ್ ಆಕ್ಷನ್ ಫೋರಂ – ಕರ್ನಾಟಕ.
   57, ಸೋನಿ, ತೇಜಸ್ವಿ ನಗರ, ಧಾರವಾಡ – 580 002







# ಭಾರತ ಜ್ಞಾನ ವಿಜ್ಞಾನ ಸಮಿತಿಯ - ನಕ್ಷೆ

1. ಮೊದಲಿನಿಂದಲೂ ಜನರ ಬೆಂಬಲವನ್ನು ಸಂಪೂರ್ಣ ಸಾಕ್ಷರತಾ ಆಂದೋಲನಕ್ಕೆ ಒದಗಿಸಿಕೊಡುವುದು.
2. ಯೋಜನೆಯ ಎಲ್ಲಾ ಹಂತಗಳಲ್ಲೂ ಸಹಕರಿಸುವುದು–ಜನರನ್ನು ಪರಿಸರವನ್ನು ಯೋಜನೆಯ ಸಹಾಯಕ್ಕೆ ತಿರುಗಿಸುವುದು-ತರಬೇತಿ ನೀಡುವುದು. ಜನರ ಬೆಂಬಲವನ್ನು ಬಲಗೊಳಿಸಿ ಕಾಯ್ದಿರಿಸುವುದು.
3. ಸತತವಾಗಿ ಅಧಿಕಾರಿಗಳ, ರಾಜಕಾರಣಿಗಳ, ಸ್ವಯಂ ಸೇವಾ ಸಂಘಗಳ, ಕಾರ್ಮಿಕ ಸಂಘಗಳ, ಬುದ್ಧಿಜೀವಿಗಳ ಸಂಪರ್ಕವಿಟ್ಟುಕೊಂಡು ಸಾಕ್ಷರತಾ ಆಂದೋಲನಕ್ಕೆ ಪ್ರೋತ್ಸಾಹ ಮತ್ತು ಸಹಾಯವನ್ನು ನೀಡುವುದು.
4. ಜಿಲ್ಲೆಗಳಲ್ಲಿ ಮತ್ತು ರಾಜ್ಯಗಳಲ್ಲಿ ಭಾರತ ಜ್ಞಾನ ವಿಜ್ಞಾನ ಸಮಿತಿಯ ಕೇಂದ್ರಗಳನ್ನು ತೆರೆದು ಸಾಕ್ಷರತಾ ಆಂದೋಲನವನ್ನು ಸ್ಥಿರಗೊಳಿಸುವುದು. ಇದರಿಂದ ಸಾಕ್ಷರತಾ ಕಾರ್ಯಕ್ರಮದ ನಂತರವೂ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ, ಮಹಿಳೆಯರ ಅಭಿವೃದ್ಧಿ, ಆರೋಗ್ಯ, ಸಾಂಸ್ಕೃತಿಕ ಜಾಗೃತಿ ಮುಂದುವರಿಸಲು ಸಹಾಯ ಮಾಡಲಾಗುವುದು. ಸಂಘಟನೆಗಳನ್ನು ರಚಿಸುವುದು ಮತ್ತು ಜನರೊಂದಿಗೆ ವಿಶ್ವಾಸದಿಂದ ಸಂಪರ್ಕ ಹೊಂದಿರುವುದು ಪ್ರಜಾಪ್ರಭುತ್ವದಲ್ಲಿ ಜನರನ್ನು ಅಭಿವೃದ್ಧಿಯ ಕಡೆಗೆ ಸೆಳೆದೊಯ್ಯಲು ಸಹಾಯಕವಾಗುವುದು.

